ವರುಷ ೨ ಕುಸುಮ ೯

# ಭ್ರಾಂತಿಯ ಸುಳಿಯಲ್ಲಿ

(ಕಾದಂಬರಿ)



ಎಮ್. ಎನ್. ಭಟ್.



ವಿವೇಕ ಸಾಹಿತ್ಯಮಾಲೆ
ಡಿ ನಂಬ್ರ 6-41, ಮಣ್ಣಗುಡ್ಡೆ,
ಮಂಗಳೂರು-3

ಸಪ್ಟಂಬರ ೧೯೫೩

ಬೆಲೆ ರೂ. ೧—೧೨—೦


| ಮುದ್ರಕರು | ಸಂಪಾದಕ |
| --- | --- |
| ಸರಸ್ವತಿ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, | ರಾಮ ಮೊಳಿಯಾರ, ವಿದ್ವಾನ್, |
| ಮಂಗಳೂರು—1. | ಮಂಗಳೂರು—3. |

# ಎರಡು ಮಾತು

ಇದೀಗ ಸಾಹಿತ್ಯಮಾಲೆಯ ನಾಲ್ಕನೆಯ ಕಂತಿನ ಪುಸ್ತಕವಾಗಿ "ಭ್ರಾಂತಿಯ ಸುಳಿಯಲ್ಲಿ" ಕಾದಂಬರಿಯನ್ನು ಚಂದಾದಾರರಿಗೆ ಅರ್ಪಿಸುತ್ತಿರುವೆವು. ಹೈಸ್ಕೂಲ ಮೆಟ್ಟಲು ಹತ್ತಿದರೂ "ಟೊಳ್ಳುಗಟ್ಟಿ"ಯಾಗಿ ಹಳ್ಳಿಯ ವ್ಯಕ್ತಿಯು ಅರಿವಿಲ್ಲದೆ ಹೇಗೆ ಸೋತು ಸುಣ್ಣವಾಗುತ್ತಿರುವನೆಂಬುದನ್ನು ಇದರಲ್ಲಿ ಲೇಖಕರು ಅಂದವಾಗಿ ಚಿತ್ರಿಸಿದ್ದಾರೆ. ಹಳ್ಳಿಯ ಪರಿಚಯವುಳ್ಳವರಿಗೆ ಇದು ಚನ್ನಾಗಿ ಅರ್ಥವಾಗಬಹುದು.

ಈ ವರುಷದ ಐದು ಮತ್ತು ಆರನೇ ಕಂತಿನ ಪುಸ್ತಕವಾಗಿ ಶ್ರೀ ಪಂ. ಮೂ. ರುದ್ರಮುನಿಸ್ವಾಮಿಯವರ "ಬೆಂದ ಜೀವಿ" ಕಾದಂಬರಿಯನ್ನು ಡಿಸೆಂಬರ್ ತಿಂಗಳಲ್ಲಿ ಚಂದಾದಾರರಿಗೆ ಕೊಡಲಿರುವೆವು.

ಹಿತಚಿಂತಕರಿಗೂ ಅಂದವಾಗಿ ಮುದ್ರಿಸಿ ಕೊಟ್ಟ "ಸರಸ್ವತಿ ಪ್ರಿಂಟಿಂಗ್ ವರ್ಕ್ಸ್"ನ ವ್ಯವಸ್ಥಾಪಕರಿಗೂ ವಂದನೆಗಳು.

ಇತಿ ತಮ್ಮವ,

**ಸಂಪಾದಕ.**



ಮುಂದಿನ ಕುಸುಮ

# "ಚಂದಜೀವಿ"

(ಕಾದಂಬರಿ)

ಶ್ರೀ. ಪಂ. ಮೂ. ರುದ್ರಮುನಿಸ್ವಾಮಿ,

ಹರಿಹರ.

# ಭ್ರಾಂತಿಯ ಸುಳಿಯಲ್ಲಿ

## ಸುಳಿ ೧.

ಬೀಜಾವರಿ ಮುಡಿಯೊಂದರ ಸ್ಥಳಕ್ಕೆ ಇಪ್ಪತ್ತು ಇಪ್ಪತ್ತೈದು ಮುಡಿ ಭತ್ತ ಕಡಿಮೆ ಪಕ್ಷ ಹೇಗೂ ಬೆಳೆ ಬರುವ ಮೂರು ಮೂರೂವರೆ ಮುಡಿಯ ಒಂದು ಬೆಳೆ ಬೆಳೆಯುವ ಬೆಟ್ಟುಗದ್ದೆಗಳೂ ಲೆಕ್ಕ ಪ್ರಕಾರ ಒಂದು ಎಕ್ರೆ ಎಂಭತ್ತೈದು ಸೆಂಟ್ಸು ಅಡಿಕೆ ತೋಟದ ಸ್ಥಳವೂ ಅದಕ್ಕೆ ತಕ್ಕಷ್ಟು ಕರೆಕಾಡಿನ ಸ್ಥಳವೂ ವಾಸುದೇವ ಭಟ್ಟರಿಗಿತ್ತು. ಅವರು ಉತ್ತಮ ತರಗತಿಯ ಕೆಲಸಗಾರರು. ದುಡಿಮೆಯೇ ಅವರ ಸರ್ವಸ್ವ. ಒಂದು ನಿಮಿಷವಾದರೂ ಮೈಗಳ್ಳರಂತೆ ಕುಳಿತಿರುವುದು ಅವರಿಗೊಗ್ಗದ ವಿಷಯ. ಗಂಗಮ್ಮನವರಿಗನುಕೂಲೆಯಾದ ಸಹಧರ್ಮಿಣಿ. ದುಡಿತದಲ್ಲಿ ವಾಸುದೇವ ಭಟ್ಟರಿಗೆ ಸರಿಸಾಟಿಯಾಗಿದ್ದಳು. ಗದ್ದೆಯ ಸಾಗುವಳಿ ತೋಟದ ಆರೈಕೆ ಮೊದಲಾದುವುಗಳಲ್ಲಿ ಅವರಿಗೆ ಕೂಲಿಯವರ ಅಗತ್ಯ ಅಪರೂಪವಾಗಿ ಬೇಕಾಗಿತ್ತಲ್ಲದೆ ವಿಶೇಷ ಬೇಕಾಗಿರಲಿಲ್ಲ. ನೇಗಿಲು ಹಿಡಿಯುವ ಸಂಪ್ರದಾಯ ಇದುವರೆಗೆ ಬ್ರಾಹ್ಮಣ ವರ್ಗಕ್ಕೆ ಹೇಳಿಲ್ಲವಾದುದರಿಂದ ಆ ಮಟ್ಟಿಗೆ ಮಾತ್ರ ವಾಸುದೇವ ಭಟ್ಟರು ಇತರರನ್ನು ಆಶ್ರಯಿಸಲೇ ಬೇಕಾಗಿತ್ತು. ನೇಜಿ ನೆಡುವುದು ಮೊದಲಾದ ಇತರ ಅತ್ಯವಶ್ಯವಾದ ಅವಸರದ ಕೆಲಸಗಳಿಗೆ ಜನರನ್ನು ಕೂಡಿಸಿಕೊಳ್ಳುತ್ತಿದ್ದರು. ಗದ್ದೆಯ ಕೆಲಸಗಳನ್ನು ಸರ್ವಸಾಮಾನ್ಯವಾಗಿ ಎಲ್ಲವನ್ನೂ ತಾವೇ ಪತ್ನಿಯ ಸಹಕಾರದಿಂದ ನಿರ್ವಹಿಸುತ್ತಿದ್ದರು. ಗದ್ದೆಗೆ ಬೇಕಾದ ಗೊಬ್ಬರಗಳನ್ನೊದಗಿಸುವುದು; ಏರುತಗ್ಗುಗಳನ್ನು ಸರಿಪಡಿಸುವುದು; ಗದ್ದೆಯಂಚನ್ನು ಕೆತ್ತಿ ರೂಪಿತಗೊಳಿಸುವುದು; ದೂರದಿಂದ ಕಣಿಯನ್ನು ಸರಿಪಡಿಸಿ ನೀರನ್ನು ತಂದೊದಗಿಸುವುದು; ಇವೇ ಮೊದಲಾದ ಎಲ್ಲಾ ಕೆಲಸಗಳನ್ನು ಹಗಲಿರುಳು ತಾವೇ

ದುಡಿದು ಪೂರೈಸುತ್ತಿದ್ದರು. ಮಳೆಯಲ್ಲಿ ನೆನೆದೊದ್ದೆಯಾದರೂ ಶೀತ ಅವರಿಗೆ ಬಾಧಿಸುವಂತಿಲ್ಲ. ಬಿಸಿಲಿಗವರ ಮೈಯೆಳ್ಳಷ್ಟೂ ಸೋತು ದಣಿಯುವಂತಿಲ್ಲ. ಆಗತಕ್ಕ ಕೆಲಸಗಳನ್ನೊಂದು ಘಳಿಗೆ ಮೊದಲಾಗಿಯೇ ಮಾಡಿ ತೀರಿಸುವ ಸ್ವಭಾವವವರದು. ಹೆಚ್ಚು ಹೆಚ್ಚು ಸಾರ ಜನಕ ಪದಾರ್ಥಗಳನ್ನು ಗದ್ದೆಗಳಿಗೊದಗಿಸಿ ಕೊಟ್ಟು ಅತ್ಯಧಿಕ ಬೆಳೆ ಪಡೆಯುವುದನ್ನು ಅವರಿಂದಲೇ ಕಲಿಯಬೇಕು. ಕಂಗಿನ ತೋಟದ ವಿಷಯದಲ್ಲೂ ಅವರ ಪರಿಶ್ರಮವಿದೇ ರೀತಿಯದು. ಕಾಲಕಾಲಕ್ಕೆ ಸರಿಯಾಗಿ ಬೇಕುಬೇಕಾದಂತೆ ಒಂದಿಷ್ಟು ಆಲಸ್ಯ ತೋರದೆ ಧಾರಾಳ ಸೊಪ್ಪು ಗೊಬ್ಬರ ಬೂದಿಗಳನ್ನು ಹಾಕಿ ಅಗತೆ ಮಾಡಿ ನೀರು ಹಾಕಿ ಮರಗಳಲ್ಲಿ ಧಾರಾಳ ಅಡಿಕೆ ಗೊನೆಗಳು ಕಂಗೊಳಿಸುವಂತೆಸಗುತ್ತಿದ್ದರು. ಕಾಯಿಪಲ್ಯದ ತರಕಾರಿ ಗಿಡಗಳನ್ನು ಧಾರಾಳ ನೆಟ್ಟು ಬೆಳೆಯಿಸುತ್ತಿದ್ದರು. ಸುವರ್ಣದಗಡ್ಡೆ, ಕುಂಬಳಕಾಯಿ, ಚೀನಿಕಾಯಿ, ಸವುತೆ, ಏನು ಬೇಕೋ ಅವನ್ನೆಲ್ಲಾ ಅವರೇ ಬೆಳೆಯಿಸುತ್ತಿದ್ದರು. ತರಕಾರಿ ಬೆಳೆಯಿಸಿದ ಗದ್ದೆಯಲ್ಲಿ ನೇಜಿ ಹಾಕಿದರೆ ಒಳ್ಳೆಯದಾಗುತ್ತದಾದ್ದರಿಂದ ಎಷ್ಟು ಸಾಧ್ಯವೋ ಅಷ್ಟು ನೆಟ್ಟು ಬೆಳೆಸುತ್ತಿದ್ದರು. ಹತ್ತಿರದ ಒಕ್ಕಲುಗಳೂ ತಮ್ಮ ಗದ್ದೆಯಲ್ಲಿ ತರಕಾರಿಯನ್ನು ತಮ್ಮಂತೆಯೇ ಬೆಳೆಸಲು ಪ್ರೋತ್ಸಾಹ ಸಹಾಯಗಳನ್ನೂ ನೀಡುತ್ತಿದ್ದರು. ಕೋಳಿ ಕೂಗುವ ಮೊದಲೆದ್ದು ತರಕಾರಿ ಗಿಡಗಳಿಗೆ ಏತದ ನೀರು ಮೊಗೆಯಲು ಒಮ್ಮೆಯಾದರೂ ಅವರು ಉದಾಸೀನವಟ್ಟುದಿಲ್ಲ. ಕಾಳುಮೆಣಸಿನ ಬಳ್ಳಿಯಿಲ್ಲದ ಒಂದೇ ಒಂದು ಮರವಾದರೂ ಅವರ ಜಮೀನಿನಲ್ಲಿ ಕಾಣಸಿಗದು. ತೆಂಗಿನ ಮರಗಳು ಹತ್ತಿಪ್ಪತ್ತೇ ಅವರಿಗಿದ್ದುವಾದರೂ ನೂರು ತೆಂಗುಗಳಲ್ಲಿ ಬರುವ ಫಲ ಅವುಗಳಲ್ಲಿ ಬರುತ್ತಿತ್ತು. ಅಂತೂ ಚೆನ್ನೂರ ಹಲಸಿನಡ್ಕದ ವಾಸುದೇವ ಭಟ್ಟರ ಜಮೀನು ಮಾದರಿ ಕೃಷಿ ಕ್ಷೇತ್ರದಂತಿದ್ದಿತು.

ಆದಾಯವನ್ನು ವೆಚ್ಚಮಾಡುವುದರಲ್ಲಿ ವಾಸುದೇವ ಭಟ್ಟರ ಕೈಮುಷ್ಟಿ ಹಿಡಿದುದಾಗಿತ್ತು. ಅಕ್ಕಿಯೇ ಪ್ರಧಾನ ಆಹಾರವಾದರೂ ಎಷ್ಟರ ಉಪಯೋಗ ಕಡಿಮೆ ಮಾಡಬಹುದೋ ಅಷ್ಟು ಕಡಿಮೆ

ಮಾಡುತ್ತಿದ್ದರು. ಅಂದರೆ ಹೊಟ್ಟೆ ಬಾಯಿ ಕಟ್ಟಿ ಗಂಟುಕಟ್ಟುತ್ತಿದ್ದ ರೆಂದಲ್ಲ. "ನಾವು ಬಡವರು; ಬಡವರಿಗೆ ಹೇಗಾದರೂ ಸರಿ; ಹೊಟ್ಟೆ ತುಂಬಬೇಕು, ತಿನ್ನಲು ಸಾರವತ್ತಾದ ಪದಾರ್ಥವೇ ಆಗಬೇಕೆಂದಿಲ್ಲ" ಎಂದು ಗೆಣಸಿನ ಬೆಳೆಯ ಸಮಯ ಅದನ್ನೂ ಹಲಸಿನ ಕಾಯಿಯ ಸಮಯ ಅದನ್ನೂ ಸಾಧ್ಯವಿದ್ದಷ್ಟು ಉಪಯೋಗಿಸುತ್ತಿದ್ದರು. "ಮನುಷ್ಯನಾದವನಿಗೆ ಎಂತಹುದೇ ಆಗಲಿ ತಿನ್ನಬಹುದಾದ ವಸ್ತು ವೆಂದಾದರೆ ಅದನ್ನು ತಿನ್ನಲು ಗೊತ್ತುಬೇಕು. ತಿಂದರಾಗದೆ ಬರಲಿಕ್ಕಾ ಗದು" ಎಂದವರ ಸಿದ್ಧಾಂತ.

ವಾಸುದೇವ ಭಟ್ಟರದು ಹಳ್ಳಿಯ ಜೀವನ. ವೇಷಭೂಷಣಗಳಲ್ಲಿ ಆಡಂಬರವಿಲ್ಲ. ನವೀನತೆಯಿರಲಿಲ್ಲ. ನಡುವಿಗೊಂದು ಒಂದೂವರೆ ಮೊಳ ಅಗಲದ ಪಂಚೆಯಿದ್ದರೆ ಸಾಕು. ಕೆಲಸದ ಸಮಯದಲ್ಲದನ್ನು ಕಚ್ಚೆ ಕಟ್ಟಿಕೊಳ್ಳುವರು. ಇತರ ವೇಳೆಯಲ್ಲಿ ಎಷ್ಟು ಮೇಲೆತ್ತಿ ಉಟ್ಟು ಕೊಳ್ಳಬಹುದೋ, ಅಷ್ಟು ಮೇಲೆತ್ತಿ ಉಡುತ್ತಿದ್ದರು ಅಂಗಿಯ ಅವಶ್ಯ ಕತೆಯೇ ಇರಲಿಲ್ಲ. ನಿಜವಾದ ದುಡಿತಗಾರ ಅಂಗಿ ಧರಿಸಲಾರ. ಅಂಗಿ ಧರಿಸಿ ರುಮಾಲು ಸುತ್ತಿ ಮಣ್ಣಲ್ಲಿ ಕೆಲಸ ಮಾಡುವುದುಂಟೇ? ಅಂದರೆ ಇಷ್ಟಲ್ಲದೆ ಬೇರೆ ಬಟ್ಟೆಬರೆ ಅವರಿಗಿಲ್ಲವೆಂದಲ್ಲ. ಒಳ್ಳೆ ಒಳ್ಳೆಯ ಬಟ್ಟೆಬರೆ, ಅಂಗಿ, ಪಟ್ಟೆ ಶಾಲು ಒಂದೋ, ಎರಡೋ, ಮೂರೋ, ಪೆಟ್ಟಿಗೆ ಯಲ್ಲಿದ್ದುವು. ಅವು ಎಷ್ಟು ವರ್ಷ ಮೊದಲಿನವಾಗಿದ್ದರೂ ಹೊಸತಿ ನಂತೆಯೇ ಇದ್ದುವು. ಅವು ಅವರಿರುವಷ್ಟು ಕಾಲಕ್ಕೂ ಸಾಕೆಂದು ದೃಢವಾದ ವಿಶ್ವಾಸ ಗಂಡನಂತೆಯೇ ಸಹಧರ್ಮಿಣಿ ಗಂಗಮ್ಮ. ಒರಟಾದರೂ ದಪ್ಪದ ಮಿರುಗಿಲ್ಲದ ಕಪ್ಪು ಬಟ್ಟೆಯನ್ನೇ ಆಕೆಯುಡು ವಳು. ಈಗಿನ ಕಾಲದ ಹೆಂಗಸರಂತೆ ಸಾಬೂನು ಹಾಕಿ ಬಟ್ಟೆಯೊಗೆ ವವಳಲ್ಲ. ಗಂಜಿನೀರಿನಲ್ಲದ್ದಿ ತೊಳೆದು ಶುಭ್ರವಾಗಿಸಿ ಮತ್ತೂ ದಪ್ಪ ವಾಗುವಂತೆ ಮಾಡಿ ಬಾಳಿಕೆ ಬರುವಂತೆ ಮಾಡುತ್ತಿದ್ದಳು. ನೊಪ್ಪು ತರುವ ಕೆಲಸದಲ್ಲಾಗಲಿ ಜಾನುವಾರುಗಳನ್ನು ಸಾಕುವುದರಲ್ಲಾಗಲಿ ನೇಜಿ ನೆಡುವ ಕೆಲಸದಲ್ಲಾಗಲಿ ನೀರು ಹಾಯಿಸುವ ಕೆಲಸದಲ್ಲಾ ಗಲಿ ಆಕೆ ಹಿಂದುಳಿಯುವವಳಾಗಿರಲಿಲ್ಲ. ಬೇಕಾದರೆ 'ಮನೆಗೆಲಸ

ತೀರಿಸಿ ವಾಸುದೇವ ಭಟ್ಟರಿಗಿಂತೊಂದು ಮೆಟ್ಟು ಮುಂದಾಗುತ್ತಿದ್ದಳು. ವಾಸುದೇವ ಭಟ್ಟರೂ ಗಂಗಮ್ಮನೂ ಈ ರೀತಿ ದುಡಿದೂ ಅಗತ್ಯ ಬಿದ್ದಾಗ ದುಡಿಸಿಯೂ ತಮ್ಮ ಅವಶ್ಯಕತೆಗೆ ಬೇಕಾದ ಸಾಮಾನುಗಳ ನ್ನೆಲ್ಲಾ ಸಂಪಾದಿಸುತ್ತಿದ್ದರು. ಹೊರಗಿನಿಂದ ಬೆಲೆತೆತ್ತು ಪಡೆಯ ಬೇಕಾದ ವಸ್ತು ಅವರಿಗೆ ತೀರಾ ವಿರಳವಾಗಿತ್ತು.

ಹೀಗೆ ಬಹುಸೂಕ್ಷ್ಮವಾಗಿ ಜೀವನ ಮಾಡುತ್ತಿದ್ದ ವಾಸುದೇವ ಭಟ್ಟರು ತುಸುಮಟ್ಟಿಗೆ ಬಾಕಿಯುಳಿಯುವ ಭತ್ತವನ್ನು ಮಳೆಗಾಲದಲ್ಲಿ ಮಾತ್ರ ಮಾರಾಟ ಮಾಡುತ್ತಿದ್ದರು. ಅತ್ಯಂತ ಪ್ರಾಮಾಣಿಕರೆಂದು ಕಂಡು ಬಂದ ಕೆಲವೊಂದು ಕುಳವಾರುಗಳಿಗೆ "ಹೊಲಿ"ಗೂ ಭತ್ತ ಕೊಡುತ್ತಿದ್ದರು. ಹೊಲಿಗಿತ್ತ ಭತ್ತವೇ ಒಂದೆರಡು ವರ್ಷಕ್ಕವರ ಮಟ್ಟಿಗೆ ಖರ್ಚಿಗೆ ಸಾಕಾಗಬಹುದೆಂದು ಕೆಲವರೆನ್ನುತ್ತಾರೆ. ಕಾಳು ಮೆಣಸು, ತೆಂಗಿನಕಾಯಿ, ಅಡಿಕೆ, ತರಕಾರಿ, ತುಪ್ಪ ಮೊದಲಾದುವನ್ನು ಮಾರಿ ನಿಧಿಯನ್ನು ದಿನೇ ದಿನೇ ವೃದ್ಧಿಪಡಿಸುತ್ತಿದ್ದರಲ್ಲದೆ ಹಾಳು ಮಾಡುತ್ತಿರಲಿಲ್ಲ. ಎಂತಹ ಪ್ರಸಂಗ ಬಂದರೂ ಕೂಡಿ ಹಾಕಿದ ನಿಧಿಯಿಂದ ಚಿಕ್ಕಾಸು ಸಹ ತೆಗೆಯಲವರ ಮನವೊಪ್ಪದು. ಇಂತಹ ಅವರಲ್ಲಿ ಆರೇಳು ಸಾವಿರ ರೂಪಾಯಿಗಳು ಇವೆಯೆಂದು ಊಹೆ.

ಈ ತೆರನಿರುವ ವಾಸುದೇವ ಭಟ್ಟರಿಗೂ ಗಂಗಮ್ಮನಿಗೂ ಬಹು ಕಾಲ ಕಳೆದರೂ ಪುತ್ರಸಂತಾನವಾಗಲಿಲ್ಲ. "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ನಾಣ್ನುಡಿ ಅವರೆದೆಯನ್ನಿರಿಯುತ್ತಿತ್ತು. ಹಲವಾರು ದೇವರು ಗಳಿಗೆ ಹಲವಾರು ಬಗೆಯಲ್ಲಿ ಹರಕೆ ಹೊತ್ತರು. ಜೋಯಿಸರಿಗೆ ಸಂತಾನವಾಗದಿರಲೇನು ಕಾರಣವೆಂದರಿಯಲು ಕೋಟಿನಾಳು (ಜಾತಕ) ತೋರಿಸಿದರು. ದೋಷಪರಿಹಾರಕ್ಕಾಗಿ ಕ್ರಮಪ್ರಕಾರ ಜೋಯಿಸ ರೆಂದಂತೆ ಗ್ರಹಶಾಂತಿಯೇ ಮೊದಲಾದುವನ್ನು ಮಾಡಿ ಬ್ರಾಹ್ಮಣ ಸಂತ ರ್ಪಣೆ, ಗೋಪೂಜೆ ಮೊದಲಾದುವನ್ನೆಸಗಿದರು. ಗ್ರಹಚಾರ ನಿವೃತ್ತಿಗೆ ಇಂತೆಸಗಿದರೂ ಸಂತಾನ ಭಾಗ್ಯೋದಯ ಕಂಡುಬರಲಿಲ್ಲ. ಅದೇ ಒಂದು ಅವರಿಗೆ ಸಹಿಸಲಾಗದ ಸಂಕಟವಾಗಿ ಪರಿಣಮಿಸಿತು. ನೆರೆ

ಮನೆಯ ಕಮಲಮ್ಮ "ಗುರುವಾಯೂರ ದೇವರಿಗೆ ಹರಕೆ ಹೊತ್ತಲ್ಲಿ ಸಂತಾನವಾಗದಿರದು; ಹುಟ್ಟಿದ ಮಗುವಿಗೆ ದೇವರೆದುರಿನಲ್ಲೇ ಅನ್ನ ಪ್ರಾಶನ ಮಾಡಿಸುವೆವು, ದೇವರಿಗೆ ಯಥಾಶಕ್ತಿ ಕಾಣಿಕೆ ನೀಡುವೆ ವೆಂದು ನಿರ್ಧರಿಸಿಕೊಳ್ಳಿರಿ; ನಿಮ್ಮ ಮನದ ಬಯಕೆ ಈಡೇರುವುದು" ಎಂದು ಗಂಗಮ್ಮನಿಗೊಂದು ಸಲಹೆಯಿತ್ತಳು. ಗಂಗಮ್ಮನೀ ವೃತ್ತಾಂತ ವನ್ನು ಪತಿಗರುಹಿದಳು. ಈರ್ವರೂ ಅನನ್ಯ ಭಾವದಿಂದ ಗುರುವಾ ಯೂರ ದೇವರಿಗೆ ಹರಕೆ ಹೊತ್ತರು. "ದೇವರಿಗೆ ನಮ್ಮ ಅಭೀಷ್ಟ ಈಡೇರಿದರೆ ಚಿನ್ನದ ತೊಟ್ಟಿಲ ಕಾಣಿಕೆ ಕೊಡುವೆ"ವೆಂದರು. ದೇವರು ಕರುಣಾಕಟಾಕ್ಷವನ್ನು ಬಡದಂಪತಿಗಳ ಮೇಲೆ ಬೀರಿದನು. ಗಂಗ ಮ್ಮನಿಗೆ ಗರ್ಭಲಕ್ಷಣಗಳು ತಲೆದೋರಿದುವು. ಗರ್ಭ ಬೆಳೆಯುತ್ತ ಬಂದಂತೆ ದಂಪತಿಗಳ ಮನವುಕ್ಕಿ ಬರತೊಡಗಿತು. ನವಮಾಸ ತುಂಬಿದ ನಂತರ ಗಂಗಮ್ಮನೊಬ್ಬ ಪುತ್ರನನ್ನು ಪಡೆದಳು. ದಂಪತಿಗಳು ಆನಂದ ಸಾಗರದಲ್ಲೋಲಾಡಿದರು. ವಾಸುದೇವ ಭಟ್ಟರ ಬಿಗಿಯಾದ ಕೈಯೂ ಶಿಶು ಜನಿಸಿದ ಸಂಭ್ರಮದಲ್ಲಿ ತುಸು ಸಡಿಲಾಯಿತು. ಶಿಶು ಜನಿಸಿದ ಬಗ್ಗೆ ನೆರೆಕರೆಯವರಿಗೂ ನಂಟರಿಷ್ಟರಿಗೂ ಬಾಯಿ ಸಿಹಿ ಮಾಡಿ ದರು. ಜಾತಕರ್ಮಾದಿ ಕ್ರಿಯೆಗಳನ್ನೆಲ್ಲಾ ಸಾಂಗವಾಗಿ ನೆರವೇರಿಸಿ ದರು. ಹುಟ್ಟಿದ ಶಿಶು ದೇವರ ವರಪ್ರಸಾದ. ದೇವರಂತೆಯೇ ಅದನ್ನು ನೋಡಬೇಕು ಎಂದು ಈ ರೀತಿ ಜನಿಸಿದ ಕೂಸಿನ ಮೇಲೆ ಅತ್ಯಧಿಕ ಮಮತೆ ತೋರಿದರು. ತಿಂಗಳಾರು ಆಗುವಾಗ ಶಿಶುವನ್ನು ಕರ ಕೊಂಡು ಗುರುವಾಯೂರ ದೇವರ ಸನ್ನಿಧಿಗೆ ಪಯಣ ಬೆಳೆಸಿದರು. ಸಂಭ್ರಮದಿಂದ ಹೊತ್ತು ಹರಕೆನೀಡಿ ದೇವರ ಹೆಸರನ್ನೇ ತಮ್ಮ ಮಗು ವಿಗಿರಿಸಿ ಅನ್ನನೀಡಿದರು. "ಕರುಣಾಳುವಾದ ದೇವರು ತಮಗೂ ಶಿಶು ವಿಗೂ ಉತ್ತರೋತ್ತರಾಭಿವೃದ್ಧಿಯನ್ನು ನೀಡಿ ಸಲಹಲಿ" ಎಂದು ಪ್ರಾರ್ಥಿಸಿ ಹಿಂತಿರುಗಿದರು. ತಮ್ಮ ಮಗು ಕೃಷ್ಣನನ್ನು ಬಹು ಜಾಗ್ರತೆ ಯಿಂದ ನೋಡತೊಡಗಿದರು. ಬಾಲಗ್ರಹ ದುಷ್ಟಪಿಶಾಚ ಮೊದ ಲಾದ ಬಾಧೆಗಳು ತಗಲದಂತೆ ಮಂತ್ರವಾದಿಗಳಿಂದ ಬೇಕುಬೇಕಾದ ರಕ್ಷೆಗಳನ್ನು ಮಾಡಿಸಿಕೊಂಡರು. "ಕೆಳಗಿರಿಸಿದರೆ ಮೈಗೆ ಮಣ್ಣಾದೀತು

ಮೇಲೇರಿಸಿದರೆ ಕಾಗೆ ಕೊಂಡುಹೋಗಬಹುದು" ಎಂದು ಕೈಯಿಂದಿಳಿ
ಸದೆ ಬಲುಕೊಂಡಾಟದಲ್ಲಿ ಸಾಕಿ ಸಲಹಿದರು. ಕೃಷ್ಣನ ನಂತರ
ಗಂಗಮ್ಮ ಇಬ್ಬರು ಗಂಡು ಮಕ್ಕಳಿಗೂ ಒಬ್ಬಳು ಹೆಣ್ಣು ಕೂಸಿಗೂ
ಜನ್ಮನೀಡಿದಳು. ಆ ಮೇಲೆ ಹುಟ್ಟಿದ ಮಕ್ಕಳಿಗೆ ಅನುಕ್ರಮವಾಗಿ
ಅನಂತ, ಪದ್ಮನಾಭ, ಸಾವಿತ್ರಿ, ಎಂಬ ಹೆಸರುಗಳನ್ನೂ ಕೊಡಲಾಯಿತು.
ಕಾಲಕ್ರಮೇಣ ಮಕ್ಕಳೆಲ್ಲಾ ಬಳೆಯುತೊಡಗಿದರು. ದೊಡ್ಡ ಮಗ
ನಾದ ಕೃಷ್ಣಭಟ್ಟನು ಹಲವಾರು ಹರಕೆ ಹೊತ್ತು ಇಹಲೋಕಕ್ಕೆ
ಬಂದುದರಿಂದ ತಂದೆತಾಯಿಗಳ ಕಣ್ಮಣಿಯಾದ. ಮನೆಯಲ್ಲಿ ಹಿರಿ
ಯಾತನಾದ ಅವನಿಗೆ ಸಲಿಗೆ ಹೆಚ್ಚು ಬಾಕಿ ಮಕ್ಕಳಿಗೂ ಆತನೇ
ಸರ್ವಾಧಿಕಾರಿ. ತಮ್ಮಂದಿರನ್ನೂ ತಂಗಿಯನ್ನೂ ಲೂಟಿ ಮಾಡಿ ಕಿವಿ
ಹಿಂಡಿ ಹೊಡೆದು ಕೂಗಾಡಿಸಿ ತನ್ನ ಹಿರಿತನವನ್ನು ತೋರುತ್ತಿದ್ದನು.
"ಲಾಲನಾದ್ಬಹವೋ ದೋಷಾಸ್ತಾಡನಾದ್ಬಹವೋ ಗುಣಾಃ" ಎಂಬ ಸಕ್ಕ
ದದ ಹಿತೋಕ್ತಿಯಂತೆ ಹಿರಿಯಾತನು ತುಸು ಕೆಟ್ಟಚಾಳಿಯುವನಾಗಿಯೂ
ಉಳಿದವರು ಸುಗುಣಿಗಳಾಗಿಯೂ ವೃದ್ಧಿಯನ್ನೈದತೊಡಗಿದರು. ಕೃಷ್ಣ
ಭಟ್ಟರು ಮೊತ್ತಮೊದಲು ಹಳ್ಳಿಯ ಶಾಲೆಗೆ ಅಕ್ಷರಾಭ್ಯಾಸ ಮಾಡಲು—
ಓದು ಕಲಿಯಲು ಸೇರಿ ನಂತರ ಇಂಗ್ಲೀಷು ಕಲಿಯಲಾಗಿ ಪೇಟೆಗೆ
ತೆರಳಿದರು.

ಚಿಕ್ಕಂದಿನಿಂದಲೂ ಸ್ವಚ್ಛಂದ ವೃತ್ತಿಯಲ್ಲಿ ಬಳೆದ ಕೃಷ್ಣ ಭಟ್ಟರು
ಓದಿನಲ್ಲಿ ಹಿಂದುಳಿದರು. ದುಂದುಗಾರಿಕೆಯಲ್ಲಿ ಮುಂದಾದರು. ಪೇಟೆ
ಯೆಂದರೆ ಹಲವಾರು ವಿಧದಲ್ಲಿ ಹಲವಾರು ಸನ್ನಿವೇಶಗಳಿಂದೊಡಗೂಡಿ
ದುಡ್ಡಿದ್ದರೆ ಕಳೆಯಲು ಬಹು ಸುಲಭವಷ್ಟೆ. ತಂದೆತಾಯಿಗಳು ದೂರ
ವಿರುವಾಗ ತನ್ನಂತೆಯೇ ಇರುವವರ ಸಂಸರ್ಗಹಿಡಿದು ಕೃಷ್ಣ ಭಟ್ಟರು
ಹಿಂದುಮುಂದುಗಳ ಯೋಚನೆ ಇಲ್ಲದೆ ಸುಖದಲ್ಲಿ ಕಾಲ ನೂಕುತ್ತಿ
ದ್ದರು. ಹಣ ಕೇಳಿದಂತೆ ಮನೆಯಿಂದ ಸಿಗುತ್ತಿತ್ತು. ಹಲವಾರು
ಬಗೆಯ ಉಡುಪುಗಳು, ರಿಸ್ಟ್ ವಾಚು, ಸ್ನೋ, ಪೌಡರ್ ಮೊದಲಾ
ದುವುಗಳನ್ನೂ ಮೆಲ್ಲಮೆಲ್ಲಗೆ ಬಳಸತೊಡಗಿದರು. ಪೇಟೆಯೆಡೆ ಬರು
ವಾಗ ತಲೆಯಲ್ಲಿ ಜುಟ್ಟಿತ್ತು. ಓರಗೆಯ ಗೆಳೆಯರಂತೆ ತಾನೂ ಜುಟ್ಟು

ಕತ್ತರಿಸಿ ಕ್ರಾಪ್ ಮಾಡಿಸಿದರು. ಮನೆಯೆಡೆ ಬಂದಾಗ ಜುಟ್ಟು ತೆಗೆದೆಯಲ್ಲಾ, ಬ್ರಾಹ್ಮಣತ್ವವೆಲ್ಲ ಳಿಯಿತು, ಸಂಧ್ಯಾವಂದನೆಯ ಸಮಯ "ತಿಷ್ಠದೇವಿ ಶಿಖಾಬಂಧೇ" ಎಂದು ದೇವಿಯನ್ನು ಧ್ಯಾನಿಸಿ ಜಪಮಾಡುವುದೆಂತು? ಎಂದು ವಾಸುದೇವ ಭಟ್ಟರು ಖೇದವನ್ನು ವ್ಯಕ್ತಪಡಿಸಿದರು. "ಎಲ್ಲರೂ ಜುಟ್ಟು ಕಂಡು ನಗುತ್ತಾರೆ. ಬೇಕಾದಲ್ಲಿ ಸರಿಯಾದ ರೀತಿಯಲ್ಲಿ ನಡೆದುಕೊಳ್ಳದಿದ್ದರಾಗುತ್ತದೆಯೇ? ಸಂಧ್ಯಾವಂದನೆಯ ಸಮಯ ಶಿಖಾಬಂಧೇ ಎನ್ನುವದರ ಬದಲು ಶಿರೋಮಧ್ಯೇ ಎಂದುಕೊಂಡರಾಯಿತು ದೇವಿಗೆ ಜುಟ್ಟಿಗಿಂತಲೂ ಉತ್ತಮವಾದ ನೆತ್ತಿಯನ್ನೇ ಸ್ಥಾನವನ್ನಾಗಿ ಕಲ್ಪಿಸಿದ ಹಾಗಾಗುವುದು. ಅಥವಾ ಆಚಾರಕ್ಕೆ ಧಕ್ಕೆ ಬರುವುದೆಂದಾದರೆ ಕಲಿತು ಬಂದ ಮೇಲೆ ಜುಟ್ಟು ಪುನಃ ಇಟ್ಟುಕೊಳ್ಳುವ" ಎಂದು ಕೃಷ್ಣ ಭಟ್ಟರು ಸಮಾಧಾನ ಹೇಳಿದರು. ಈ ರೀತಿ ಕೃಷ್ಣ ಭಟ್ಟರು ಷೋಕಿನಲ್ಲಿ ಮುಂದಾಗಿ ಓದಿನಲ್ಲಿ ಹಿಂದಾಗಿ ಒಂದೊಂದೇ ಕ್ಲಾಸುಗಳಲ್ಲಿ ಚೆನ್ನಾಗಿ "ಸರ್ವೀಸು" ಮಾಡುತ್ತಾ ಇಂಗ್ಲೀಷು ಕಲಿಯತೊಡಗಿದರು ಒಬ್ಬ ಮಗನನ್ನೇ ವಿದ್ಯಾರ್ಜನೆಗೆ ಪೇಟೆ ಕಡೆ ಕಳುಹಿ ಹಣದ ವೆಚ್ಚ ಸಹಿಸಲಾಗುವುದಿಲ್ಲ. ಆದ್ದರಿಂದ ಉಳಿದವರಿಗೆ ಹಳ್ಳಿಯ ಸಾಲೆಯ ಶಿಕ್ಷಣವೇ ಸಾಕು ಎಂದು ವಾಸುದೇವ ಭಟ್ಟರು ನಿರ್ಧರಿಸಿದರು. ಅನಂತ ಭಟ್ಟರೂ ಪದ್ಮನಾಭ ಭಟ್ಟರೂ ಹಳ್ಳಿಯ ಶಾಲೆಯಲ್ಲಿ ಎಂಟನೆ ಕ್ಲಾಸಿನವರೆಗೆ ಕಲಿತರು. ಸಾವಿತ್ರಿ ಹೆಣ್ಣು ಕೂಸು, ಮುಸುರೆ ತಿಕ್ಕುವ ಹೆಂಗಸರು ಶಾಲೆಗೆ ಹೋಗಿ ಕಲಿಯಲೇನಿದೆ? ಅಕ್ಷರಾಭ್ಯಾಸ ಮಾಡಿ ಹಾಡುಗಳನ್ನು ಓದಿ ಕಲಿಯಲರಿತರೆ ಸಾಕು. ಇದಕ್ಕಿಂತ ಹೆಚ್ಚಿನ ವಿದ್ಯಾಭ್ಯಾಸ ಬೇಡವೆಂದು ಹಳ್ಳಿಗರ ಅಭಿಮತ. ಅಂತಿರಲು ಸಾವಿತ್ರಿ ಹೆಚ್ಚು ಕಲಿಯುವಂತಿಲ್ಲ. ಅಣ್ಣಂದಿರೊಂದಿಗೆ ತಂದೆತಾಯಿಗಳು ಲೆಕ್ಕ, ಮಗ್ಗಿ, ವಾರ, ನಕ್ಷತ್ರನಾಮ, ತಿಂಗಳುಗಳ ಹೆಸರುಗಳು ಮೊದಲಾದುವನ್ನು ಬಾಯಿಪಾಠ ಮಾಡಿಸಿ ಅಕ್ಷರಾಭ್ಯಾಸವನ್ನು ಸಾವಿತ್ರಿಗೂ ಮಾಡಿಸಿದರು. ತಾಯಿಯಿಂದ ಮನೆಗೆಲಸದ ಶಿಕ್ಷಣವನ್ನು ಏಳೆಂಟು ವರ್ಷವಾಗುವಾಗಲೇ ಪಡೆದಳು. ಹೀಗೆ ಸಾವಿತ್ರಿ ಹಳ್ಳಿಯ ಹೆಂಗಸರಿಗೆ ಅವಶ್ಯವೆನಿ

ಸಿದ ವಿದ್ಯಾಭ್ಯಾಸವನ್ನು ಸಂಪೂರ್ಣ ಪಡೆದಳು. ಕವಿರಾಜಮ
ದಲ್ಲಿ ದಕ್ಷಿಣೋತ್ತರ ಮಾರ್ಗಗಳೆಂದು ಎರಡು ಮಾರ್ಗಗಳ
ಲ್ಪಟ್ಟಿವೆ. ಅವು ಕಾವ್ಯಗಳಲ್ಲಾದರೆ ಪುರಾತನ ಹಳ್ಳಿಯ ಬ್ರಾಹ
ಸಂಸಾರದಲ್ಲೂ ಎರಡು ಮಾರ್ಗ. ಗಂಡು ಹುಡುಗರಿಗೆ ಪ್
ಬಂತೆನ್ನುವಾಗ ದಕ್ಷಿಣ ಮಾರ್ಗ. ಹುಡುಗಿಯರಿಗೆ ಉತ್ತರ ಮಾ
ಗಂಡು ಮಕ್ಕಳಿಗೆ ವೇದೋಕ್ತ ಉಪನಯನಾದಿ ಸಂಸ್ಕಾರಗಳು
ನಂತರ ಕೃಷ್ಣ ಭಟ್ಟರು ಪೇಟೆಗೆ ಕಾಲಿರಿಸಿದರಷ್ಟೆ! ಅನಂತ ಭ
ದರೋ ಹದಿನಾಲ್ಕು ವರ್ಷ ತುಂಬಿದೊಡನೆ ದಕ್ಷಿಣಾಮಾರ್ಗವ
ಲಂಬಿಸಬೇಕಾಯಿತು. ಎಲ್ಲರೂ ಕಲಿತು ಏನು ಮಾಡಲಿದೆ? ಅ
ಭಟ್ಟರನ್ನು ಮನೆಯಲ್ಲೇ ಇರಿಸಿಕೊಳ್ಳುವ ಎಂದರೆ ದುಡಿಯಲಿ
ಜಮೀನು ಚಿಕ್ಕದು. ಆದ್ದರಿಂದ ವಾಸುದೇವ ಭಟ್ಟರು ಹಣ ಸ
ದನೆಗಾಗಿ ತಮ್ಮ ಪರಿಚಿತ ಭಾವನಂಟ ಪರಮೇಶ್ವರ ಭಟ್ಟರೊ
ಅನಂತ ಭಟ್ಟರನ್ನು ತೆಂಕಲಾಗಿ ಮಲೆಯಾಳ ರಾಜ್ಯಕ್ಕೆ ಶಾಂತಿ
ಕಳುಹಿದರು ಶಾಂತಿಗಾಗಿ ತೆರಳಿದ ಅನಂತ ಭಟ್ಟರು ಒಂದೆ
ವರ್ಷ ಆ ಕೆಲಸ ಮಾಡಿ ಅದರಲ್ಲಿ ಬೇಸರ ಹೊಂದಿ ಕಾಫಿ ಹೋ
ಲೊಂದರಲ್ಲಿ ಅಡುಗೆ ಭಟ್ಟರಾಗಿ ಸೇರಿದರು. ಕಾಫಿ ಹೋಟೆ
ಸರಿಯಾಗಿ ಕೆಲಸ ಮಾಡಿ ಮೆನೇಜರರ ವಿಶ್ವಾಸಕ್ಕೆ ಪಾತ್ರರೂ ಆ
ತಿಂಗಳೊಂದಕ್ಕೆ ಮೂವತ್ತು ರೂಪಾಯಿಗಳನ್ನು ಮನೆಗೆ ತಂದೆತ
ಗಳಿಗೆ ಕಳುಹಲೂ ತೊಡಗಿದರು.

ಕೃಷ್ಣ ಭಟ್ಟರು ಇಂಗ್ಲೀಷು ಕಲಿತು ದೊಡ್ಡ ದೊಡ್ಡ ಪ
ಪಾಸು ಮಾಡುವವರು. ಪಾಸಾಗಿ ದೊಡ್ಡ ಹುದ್ದೆ ಸಂಪಾದಿಸಿ
ಯತಕ್ಕವರು. ಅನಂತ ಭಟ್ಟರು ಪರವೂರಲ್ಲಿದ್ದು ಹಣ ಸಂಪಾ
ವವರು. ಇನ್ನುಳಿದವರು ಪದ್ಮನಾಭ ಭಟ್ಟರು. ಅವರು ಮನೆಯ
ಇರಬೇಕು. ತನ್ನ ಕಾಲಾನಂತರ ಮೂರು ಜನ ಮಕ್ಕಳಿದ್ದೂ
ಗೇಣಿಗೆ ಕೊಡಬೇಕಾದ ಪ್ರಸಂಗ ಬರಬಾರದು. ಪಿತ್ರಾರ್ಜಿತ
ಯಲ್ಲಿ ತನ್ನಂತೆ ಅಥವಾ ತನ್ನಿಂದಲೂ ಮಿಗಿಲಾಗಿ ದುಡಿಯುತ್ತಾ ಊ
ತಮ್ಮ ಮನೆತನದ ಕುಡಿಯುಳಿಸಿ ದೀಪ ಉರಿಸುವವರಾಗಬೆ

ಎಂದು ವಾಸುದೇವ ಭಟ್ಟರು ಬಗೆದರು. ಅಂತೆಯೇ ರೈತರಿಗೆ ಬೇಕು ಬೇಕಾದ ಅನುಭವಗಳನ್ನು ಪದ್ಮನಾಭ ಭಟ್ಟರ ತಲೆಯಲ್ಲಿ ತುಂಬಿಸ ತೊಡಗಿದರು. ತನ್ನೊಂದಿಗೆ ಹೊಲದಲ್ಲಿ ದುಡಿಸಿ ಯೋಗ್ಯ ತರಬೇತಿಯನ್ನು ಕೊಡತೊಡಗಿದರು.

ಸಾವಿತ್ರಿಗೆ ವರ್ಷ ಹದಿಮೂರು ತುಂಬಿತು. “ಅಷ್ಟವರ್ಷಾ ಭವೇತ್ ಕನ್ಯಾ” ಎಂದು ಶಾಸ್ತ್ರ ಸಾರಿದರೂ ಅದು ಬಹಳ ಹಿಂದಿನ ಕಾಲಕ್ಕಾಯಿತು. ಆದರೂ ಹನ್ನೆರಡು ಕಳೆದು ವರ್ಷ ಹದಿಮೂರಾಯಿತಲ್ಲ. ಈಗ ತಾನೆ ಶಾರದಾ ಬಿಲ್ಲು ಪಾಸಾಗಿದ್ದರೂ ಹದಿನಾರು ಹದಿನೇಳು ವರ್ಷ ಪ್ರಾಯ ಬರುವ ತನಕ ಹುಡುಗಿಯನ್ನು ಯೋಗ್ಯ ವರನಿಗೆ ಕೊಡದಿದ್ದರೆ ನಾಚಿಕೆಗೇಡಲ್ಲವೇ? ಹುಡುಗಿಗೆ ಪ್ರಾಯ ಮೀರಬಾರದಲ್ಲಾ ಎಂದು ವಾಸುದೇವ ಭಟ್ಟರೂ ಗಂಗಮ್ಮನೂ ಚಡಪಡಿಸತೊಡಗಿದರು. ತಮ್ಮೊಳಗಲ್ಲೇ ಯೋಗ್ಯರಾದವರಿಗೆ ಸುಕುಮಾರಿಯನ್ನೀಯುವ ಅಂದರೆ ವರದಕ್ಷಿಣೆ ಹೇಳಿದಷ್ಟು ಕೊಡಬೇಕು. ಹಣವಿಲ್ಲದೆ ಪುನರ್ವಿವಾಹವೆಸಗಿಕೊಳ್ಳುವ ಮುದುಕರಿಗೆ ಇದ್ದ ಒಬ್ಬಳೇ ಒಬ್ಬ ಮಗಳನ್ನು ಸುಕುಮಾರಿಯನ್ನೀಯುವುದು ವಾಸುದೇವ ಭಟ್ಟರಿಗೆ ಅಷ್ಟೊಂದು ಹಿತವೆನಿಸಲಿಲ್ಲ. ಉತ್ತರದ ಕಡೆಗೆ ಗಿರಾಕಿಗಳನ್ನೊದಗಿಸುವ ವಿಶ್ವೇಶ್ವರ ಭಟ್ಟರು ತಮ್ಮೊಡನೆ ಕೆಲ ಬಾರಿ ಒಳ್ಳೊಳ್ಳೆಯ ಕುಳವಾರುಗಳ ಪ್ರಸ್ತಾಪವೆತ್ತಿದ್ದರೂ ಕಣ್ಣಿಗೆ ಕಾಣದಷ್ಟು ದೂರ ಹೆತ್ತ ಕೂಸನ್ನು ತಬ್ಬಲಿಯನ್ನೀಯುವಂತೆ ಹಣದಾಸೆಗೀಯಲು ಗಂಗಮ್ಮನಿಗೆಳ್ಳಷ್ಟೂ ಮನವಿರಲಿಲ್ಲ. “ಮೂಡು ಪ್ರಾಂತ್ಯವಾದರೂ ಚಿಂತಿಲ್ಲ. ನೆನಸಿದರೆ ಹೋಗಿ ಬರಲು ಅನುಕೂಲವಿರಬೇಕು. ಎಳೆಯ ಪ್ರಾಯದ ಯುವಕನಿಗೇ ಕನ್ನಿಕೆಯನ್ನು ಕೊಡಬೇಕು. ಕೊಟ್ಟಲ್ಲಾದರೂ ಸುಖವಾಗಿರಬೇಕು ನಮ್ಮ ಹಸುಗೂಸು. ನಮಗೂ ಮನಸ್ಸಿಗೆ ನೆಮ್ಮದಿ ಬರಬೇಕು. ಹಣದಾಸೆಗೆ ಉತ್ತರ ಪ್ರದೇಶಕ್ಕೆ ಪುತ್ರಿಯನ್ನೀಯುವುದು ಬೇಡ”ವೆಂದು ಗಂಗಮ್ಮ ಪದೇ ಪದೇ ವಾಸುದೇವ ಭಟ್ಟರೊಡನನ್ನುತ್ತಿದ್ದಳು.

ಮೂಡುಗಡೆಯಿಂದಾದರೂ ಒಳ್ಳೆಯ ಜನರಿದುವರೆಗೆ ಬಂದಿಲ್ಲ; ಸಿಕ್ಕಿಲ್ಲ; ಎಂದು ವಾಸುದೇವ ಭಟ್ಟರೂ ಗಂಗಮ್ಮನೂ ಯೋಚನಾ ಕ್ರಾಂತರಾಗಿರುವಾಗ ಒಬ್ಬರು ಮೂಡುಸೀಮೆಯಿಂದ ಕನ್ಯಾರ್ಥಿಗಳಾಗಿ ತಮ್ಮ ಬಂಧುಗಳಾದ ಸುಬ್ರಹ್ಮಣ್ಯ ಭಟ್ಟರೊಡನೆ ಬಂದರು. ಬಂದವ ರನ್ನು ಉಪಚರಿಸಿದ ನಂತರ ಸುಬ್ರಹ್ಮಣ್ಯ ಭಟ್ಟರು ಬಂದ ಉದ್ದೇಶ ತಿಳಿಸಿ ದರು. ಕನ್ಯಾರ್ಥಿ ಯುವಕ ಇಪ್ಪತ್ತೈದು ಇಪ್ಪತ್ತಾರು ವರ್ಷ ಪ್ರಾಯ ದವನಾಗಿದ್ದನು. ನೋಡಲು ಗಂಭೀರ ಮುಖಮುದ್ರೆಯ ಲಕ್ಷಣ ವಂತನು. "ಮೊದಲೊಮ್ಮೆ ವಿವಾಹವಾಗಿ ಒಂದೂವರೆ ವರ್ಷದೊಳಗೆ ಅವರ ಭಾರ್ಯೆ ಅಕಸ್ಮಾತ್ ಕಾಯಿಲೆ ಹಿಡಿದು ಎರಡೇ ದಿನಗಳಲ್ಲಿ ನರಳಿ ಪರಂಧಾಮವನ್ನೈದಿದಳಂತೆ. ಸೀಮೆ ಮೂಡಾಗಿದ್ದರೂ ವಿಶೇಷ ಜ್ವರದ ಭೀತಿಯಿರುವ ಸ್ಥಳದವರಲ್ಲವಂತೆ. ಜಾಗರೂಕತೆ ತಕ್ಕೊಂಡರೆ ಜ್ವರದ ಭೀತಿ ಇಲ್ಲ ಇಷ್ಟರ ತನಕ ಮಲೆಜ್ವರ ಹಿಡಿದು ನರಳಿದವರು ಅವರಲ್ಲ. ಕಾಣುವಾಗಲೇ ತಿಳಿಯುವುದಿಲ್ಲವೇ? ಹೆಸರು ಗಜಾನನ ಭಟ್ಟರೆಂದು. ಒಳ್ಳೆಯ ಕುಲೀನರು ತಕ್ಕಮಟ್ಟಿಗೆ ಊಟಕ್ಕೆ ಜಮೀನು ಇದೆ. ಕೈಯಲ್ಲಿ ತಕ್ಕಮಟ್ಟಿಗೆ ಐದಾರು ಸಾವಿರ ರೂಪಾಯಿಗಳು ನಗದಾಗಿ ಇವೆ. ತಂದೆಗೊಬ್ಬನೇ ಮಗ. ತಂದೆ ತೀರಿ ಹೋಗಿ ಮನೆಯಲ್ಲಿ ತಾಯಿ ಮಾತ್ರ ಇರುವಳು. ಆಕೆಯೂ ಮುದುಕಿಯಾಗಿರುವಳು. ಈ ಕಡೆಯ ಹುಡುಗಿಯೇ ಸುಂದರಿಯೂ ಸುಶೀಲೆಯೂ ಚುರುಕಿನವಳೂ ಆಗಬೇಕೆಂದು ಬಂದಿರುವರು. ಹಣದಾಸೆ ಇಲ್ಲ. ಆಗದೆ ಇಲ್ಲ. ಮತ್ತೆ ನಿಮ್ಮಿಷ್ಟ" ಎಂದು ಸುಬ್ರಮಣ್ಯ ಭಟ್ಟರು ವಾಸುದೇವ ಭಟ್ಟರಿಗೆ ಸಂಪೂರ್ಣ ಸ್ಥಿತಿಗತಿಗಳ ವಿವರ ಮಾಡಿಕೊಟ್ಟರು. ವಾಸುದೇವ ಭಟ್ಟ ರಿಗೂ ಆಗಬಹುದೆಂದು ತೋರಿತು. ಗಂಗಮ್ಮನೊಡನ ವಿಚಾರಿಸಿದರು. ನಿಮ್ಮಿಷ್ಟವೇ ನನ್ನಿಷ್ಟವೆಂದಳು ಗಂಗಮ್ಮ. ವರನೊಂದಿಗೆ ಅವರೂರಿಗೆ ತೆರಳಿ ತಾಯಿಯೇ ಮೊದಲಾದ ಬಂಧುಬಳಗದವರನ್ನು ಕಂಡು ಮಾತ ನಾಡಿ ಸಂಪೂರ್ಣ ಸ್ಥಿತಿಗತಿಗಳನ್ನು ಪ್ರತ್ಯಕ್ಷ ತಿಳಕೊಂಡು ಬರುವೆ ನೆಂದು ನಿಶ್ಚಯಿಸಿದರು. ವಾಸುದೇವ ಭಟ್ಟರು "ನಿಮ್ಮೂರಿಗೆ ಸಂಗಡ ಬಂದು ಬಂಧುಬಳಗದೊಡನೆ ಮಾತುಕತೆಯಾದ ನಂತರ ಎಲ್ಲವನ್ನೂ

ನಿಶ್ಚಯಿಸುವ" ಎಂದು ಗಜಾನನ ಭಟ್ಟರಿಗೆ ಉತ್ತರ ಕೊಟ್ಟರು. ಗಜಾನನ ಭಟ್ಟರೊಂದಿಗೆ ಅವರೂರಿಗೆ ತೆರಳಿ ಗಜಾನನ ಭಟ್ಟರ ವಿಚಾರಗಳನ್ನು ನೆರೆಯವರಿಂದ ವಿಚಾರಿಸಿ ಅರಿತುಕೊಂಡರು ಪ್ರತ್ಯಕ್ಷ ನೋಡಿಯೂ ವಾಸುದೇವ ಭಟ್ಟರು ತಿಳಕೊಂಡರು. ವರನೊಂದಿಗೂ ಬಂಧುಬಳಗದೊಡನೆಯೂ ಜಾತನಾಡಿ ಮುಹೂರ್ತ ನಿಶ್ಚಯಿಸಿ ಕೊಂಡೇ ಬಂದರು.

ಗಜಾನನ ಭಟ್ಟರಿಗೆ ಮನೆಯಲ್ಲಿ ಜನ ಕಡಿಮೆ. ದಿನಹರಣ ಮಾಡಲು ಮನಸ್ಸಿಲ್ಲ. ಮಳೆಗಾಲ ಪ್ರಾರಂಭವಾಗಿತ್ತು. ಆದರೂ ತರಾತುರಿಯಿಂದ ಬಹುಬೇಗನೆ ಮದುವೆಯ ಮುಹೂರ್ತ ನಿಶ್ಚಯಿಸಿ ದರು. ವಿವಾಹಕ್ಕೆ ಬೇಕಾದ ಏರ್ಪಾಡುಗಳು ಭರದಿಂದಾಗತೊಡಗಿ ದುವು. ವಾಸುದೇವ ಭಟ್ಟರ ಮನೆ ಚಿಕ್ಕದು. ಮುಳಿಹುಲ್ಲು ಮಾಡಿ ನದು. ಒಬ್ಬಳೇ ಒಬ್ಬ ಸುಕುಮಾರಿಯ ಮದುವೆಗೆ ನೆಂಟರಿಷ್ಟರಿಗೆ ನೆರೆ ಯವರಿಗೆ ಹೇಳಿಕೆ ಹೇಳದೆ ಮನವೊಪ್ಪದು. ಚಿಕ್ಕ ಮನೆಯಲ್ಲಿ ಔತಣ ಸುಧಾರಿಸುವುದು ಕಷ್ಟ. ಆದ್ದರಿಂದ ಅಂಗಳದಲ್ಲೊಂದು ಉಯ್ಯಾ ಪರೆ ಹಾಕಿದರು. ನೆಂಟರಿಷ್ಟರಿಗೆ ನೆರೆಕರೆಯವರಿಗೆ ವಿವಾಹ ಮಹೋತ್ಸ ವದ ಆಮಂತ್ರಣಹೋಯಿತು. ಅನಂತ ಭಟ್ಟರು ಕೆಲದಿನಗಳ ಬಿಡು ಮಾಡಿಕೊಂಡು ಬಂದರು. ಕೃಷ್ಣಭಟ್ಟರೂ ಕೆಲವು ದಿನಗಳಿಗೆ ರಜೆ ಅರ್ಜಿ ಬರೆದು ಬಂದರು. ಅಣ್ಣಂದಿರಾದ ಅನಂತ ಭಟ್ಟರಿಗೂ ಕೃಷ್ಣಭಟ್ಟ ರಿಗೂ ತಂಗಿಯ ಮದುವೆಯೆಂದಾಗ ಹೇಳಿ ತೀರದ ಸಡಗರ. ವಿವಾಹ ಹಗಲು ಹೊತ್ತಿನಲ್ಲಲ್ಲ, ರಾತ್ರಿ ಹೊತ್ತಿನಲ್ಲಿ. ಮಧ್ಯರಾತ್ರಿಯ ನಂತರ ಎರಡೂವರೆ ಘಂಟೆಯ ಸಮಯಕ್ಕೆ ಶುಭಲಗ್ನವೆಂದು ಜೋಯಿಸರು ಮುಹೂರ್ತ ಮಾಡಿಕೊಟ್ಟಿದ್ದರು. "ಮುದ್ದು ತಂಗಿಯ ಮದುವೆ ಯೂಟಕ್ಕೆ ಲಾಡು ಹೋಳಿಗೆಗಳಾಗಬೇಕು. ತಾನೇ ತಯಾರಿಸುವೆ" ನೆಂದು ಅನಂತ ಭಟ್ಟರು ಉತ್ಸಾಹ ತೋರಿದರು "ಮಳೆಗಾಲದ ಸಮಯ ಒಂದು ದೊಡ್ಡ ಉಯ್ಯಾಪರೆ ಬೆಳಕಿಗಾಗಿ ಅಲ್ಲಿ ಇಲ್ಲಿ ಎಷ್ಟೊಂದು ಚಿಮಿಣಿ ಎಣ್ಣೆಯ ದೀಪಗಳು. ಸರಳ ದೀವಗಳು ಗುಟ್ಟಿ

ದೀಪಗಳು ಲಾಟಾನುಗಳು ಬೇಕಾಗಿ ಬರಲಿಕ್ಕಿಲ್ಲ. ಬೆಳಕುಗಳು ಹಲ ವಿದ್ದರೂ ಗಾಳಿ ಮಳೆ ಬಂದಾಗ ಚುಯಿಂಕು ಆಗುವುವು. ಬೆಳಕು ಸರಿಯಾಗಿ ಸಿಗದು. ಖರ್ಚು ಹೆಚ್ಚು. ಎರಡು ಮೂರು ಪೆಟ್ರೋಮೆಕ್ಸ್ ತರಿಸುವೆ. ಆಗ ರಾತ್ರಿ ಹಗಲಿನಂತಾದೀತು. ಆಡಂಬರದ ಸಡಗರದ ಭಾರವೆಲ್ಲಾ ತನ್ನ ಮೇಲಿರಲಿ. ಊಟೋಪಚಾರಗಳ ಮೇಲ್ತನಿಕೆ ಜಾಗರೂಕತೆ ತಮ್ಮನದಾಗಲಿ” ಎಂದು ಕೃಷ್ಣಭಟ್ಟರು ನಿಶ್ಚಯಿಸಿದರು.

ಮದುವೆಯ ದಿನ ಬಂತು. ಗುಡುಗು ಗುಡುಗಿ ಕೋಲ್ಮಿಂಚು ಕೋರೈಸಿ ಮಳೆ ಧಾರಾಕಾರ ಸುರಿಯುತ್ತಿತ್ತು. ಉಯ್ಯಾಪರೆಯೊಳಗೆ ಮಳೆ ನೀರು ಸುರಿಯದಿದ್ದರೂ ಜನಜಂಗುಳಿ ತುಳಿದುದರಿಂದಲಾಗಿ ನೆಲವೆಲ್ಲಾ ಕೆಸರು ಕೆಸರಾಗಿತ್ತು. ಕೆಸರಾದ್ದರಿಂದ ಹಾಸಿದ ಚಾಪೆಗಳೆಲ್ಲಾ ನೆಲಕ್ಕಂಟಿ ಹೋಗಿದ್ದುವು. ಬೆಳ್ಳಗಿನ ಪೋಷಾಕು ಧರಿಸಿ ಚಾಪೆಯಲ್ಲಿ ಕುಳಿತವರ ಬಟ್ಟೆಬರೆಗಳಿಗೆ ಕೆಂಪು ಶಾಯಿಯು ಮೊಹರೊತ್ತಿದಂತಾಗುತಿತ್ತು. ಹರಕು ಮುರುಕ ಕೊಡೆ ಹಿಡಕೊಂಡು ಮಳೆಯಲ್ಲೊದ್ದೆಯಾಗಿ ಬಂದ ಜನರು ನೀರು ಹರಿಯುವ ಕೊಡೆಗಳನ್ನು ಹಿಡಕೊಂಡು ಉಯ್ಯಾವರೆಯೊಳಗೆ ಬಂದು ತಂಗುತ್ತಿದ್ದರು. ಇಂತಹ ಮಳೆಯ ಸಮಯದಲ್ಲಿ ಕೊಡೆಯನ್ನೊಂದು ಕಡೆ ಇರಿಸುವ ಧೈರ್ಯ ಯಾರಿಗೂ ಇದ್ದಿಲ್ಲ. ಎಲ್ಲಾದರೂ ಒಂದು ಬದಿಯಲ್ಲಿರಿಸಿದರೆ ಅದು ಕೊಡೆಯಲ್ಲವೇ? ಕಾಲು ಹಿಡಿದವರೊಂದಿಗೆ ಹೋಗಿ ಬಿಡಬಹುದು. ವಾದ್ಯದವರು ಉಯ್ಯಾಪರೆಯಲ್ಲಿ ಜಾಗವಿಲ್ಲದುದರಿಂದ ಸನಿಯದಲ್ಲಿರುವ ಕಟ್ಟಿಗೆ ದಾಸ್ತಾನು ಮಾಡುವ ಕೊಟ್ಟಿಗೆಯಲ್ಲಿ ಕುಳಿತಿದ್ದರು. “ವಾಲಗ ವಾಲಗ” ಎಂದು ಉಯ್ಯಾಪರೆಯಿಂದ ಬೊಬ್ಬೆ ಹಾಕಿದರೂ ಮಳೆಯಿಂದಲಾಗಿಯೂ ಜನರ ಗೌಜಿಯಿಂದಲಾಗಿಯೂ ಅವರಿಗೆ ಕೇಳಿಸುತ್ತಿರಲಿಲ್ಲ. ಗುರಿಕಾರರಿಗೆ ಮಳೆಯಲ್ಲಿ ಹೋಗಿ ಬೇಕಾದಂತೆ ಎಚ್ಚರಿಸಲು ಉದಾಸೀನ ಬಿಡುತ್ತಿರಲಿಲ್ಲ. ಆದ್ದರಿಂದ ವಾದ್ಯ ನಿಲ್ಲಿಸುವುದೇ ಬೇಡ. “ವಾಲಗ ಊಟಕ್ಕಾಗುವ ವರೆಗೆ ಮೊಳಗುತ್ತಲೇ ಇರಲಿ.

ತದನಂತರ ಊಟ ಕಳೆದು ಪುನಃ ಪ್ರಾರಂಭಿಸಿದರೆ ವಿವಾಹ ಕ್ರಿಯೆ ಸಂಪೂರ್ಣ ಕಳೆದನಂತರ ನಿಲ್ಲಿಸಿದರೆ ಸಾಕು" ಎಂದು ತೀರ್ಮಾನಿಸಿ ಅಜ್ಞೆ ಇತ್ತರು. ಈ ನಿರ್ಣಯದಿಂದಲಾಗಿ ವಾದ್ಯ ಎಡೆಬಿಡದೆ ಮೊಳಗ ಬೇಕಾಯಿತು. ಒದ್ದೆಯಾಗಿ ಚಳಿಹಿಡಿದು ಕೂಗುತ್ತಿರುವ, ಜಾರಿ ಬಿದ್ದು ಅಳುತ್ತಿರುವ ಅರೆನಿದ್ದೆಯಿಂದೆದ್ದು ಚಂಡಿಹಿಡಿದು ಕೂಗುತ್ತಿ ರುವ ಮೊಲೆ ಹಾಲಿಗಾಗಿ ಕಿರುಚುತ್ತಿರುವ ಮಕ್ಕಳ ರೋದನ ಧ್ವನಿ ಯೊಂದಿಗೆ ಅವ್ಯಾಹತವಾಗಿ ನೇರಿಕೊಳ್ಳುತ್ತಿತ್ತು. ಉಯ್ಯಾವರೆಯಲ್ಲಿ ಕೃಷ್ಣಭಟ್ಟರು ತಂದಿರಿಸಿದ ಪೆಟ್ರೊಮೆಕ್ಸ್‌ಗಳಿಂದಲಾಗಿ ಧಾರಾಳ ಬೆಳ ಕಿತ್ತು. ಪೆಟ್ರೋಮೆಕ್ಸ್ ಲೈಟು ಹಳ್ಳಿಗೆ ಹೊಸದು. "ಇದರ ಬೆಳ ಕಿಗೂ ಹಗಲಿನ ಸೂರ್ಯನ ಬೆಳಕಿಗೂ ಹೆಚ್ಚಿನಂತರವಿಲ್ಲ. ಇದ್ದರೆ ಇರಬೇಕು ಈ ರೀತಿಯಲ್ಲಿ ಬೆಳಕು. ಕೃಷ್ಣಭಟ್ಟರು ಬಲುಜಾಣರು. ಇಂಗ್ಲೀಷು ಕಲಿಯುವವರು ನಮ್ಮ ಹಾಗೆ ಕುರುಬರೇ?" ಎಂದನ್ನುವ ಬಹುಜನರಿದ್ದರು. ಉಯ್ಯಾವರೆಯಲ್ಲಿ ಜನಸಂದಣಿ ವಿಪರೀತವಾದುದ ರಿಂದ ಇಸ್ಪೀಟಾಟವಾಡುವ ಮಂದಿ ದೀಪದ ಮಂದಪ್ರಕಾಶವಿರುವ ಮನೆ ಜಗಲಿಯ ಮೂಲೆಗೆ ಹೋದರು. ಚಾಪೆಯೊಂದನ್ನು ತಂದು ಉದ್ದಕ್ಕೆ ಹರಡಿ ಇಸ್ಪೀಟಾಟವಾಡಲು ಏಳೆಂಟು ಮಂದಿ ಸುತ್ತುಗಟ್ಟಿ ಕುಳಿತರು. ಅಷ್ಟರಲ್ಲೇ ಚಾಪೆಯಡಿಯಿಂದ ಚಾಪೆಯ ತುದಿಭಾಗ ದಲ್ಲಿ ಮಗುವೊಂದು ಅಳುವ ಧ್ವನಿ ಕೇಳಿಸಿತು. ಇವರತ್ತದೃಷ್ಟಿ ಹೊರ ಳಿಸುವುದೂ ಮಗುವಿನ ತಾಯಿ ಬರುವುದೂ ಸರಿಹೋಯಿತು. ಮಗು ವಿನ ತಾಯಿ ಇಸ್ಪೀಟು ಪಿಡಿ ಬಿಚ್ಚತೊಡಗಿದವರ ಮೇಲೆ ಬೈಗಳ ಮಳೆಗರೆಯತೊಡಗಿದಳು. ಏನು ನಿಮಗೆ ಕಣ್ಣಿಲ್ಲವೇ? ಮಗುವಿನ ಮೇಲೆ ಚಾಪೆಬಿಡಿಸಿ ಕುಳಿತುಕೊಳ್ಳುವುದೇ? ನೀವು ಅನ್ನ ತಿನ್ನು ವುದೆಂದು ಕಾಣುವುದಿಲ್ಲ. ಎರಡು ಕಾಲಿನ ಪ್ರಾಣಿಗಳು. ಇಸ್ಪೀ ಟಾಟವಾಡುವ ಭರದಲ್ಲಿ ಜೀವಹೋದರೂ ಅರಿಯಲಾರದು ನಿಮಗೆ. ನಿಮ್ಮ ಇಸ್ಪೀಟಾಟಕ್ಕೊಂದಿಷ್ಟು ಬೆಂಕಿ ಬೀಳಲಿ" ಎಂದು ಮೊತ್ತ ಮೊದಲು ರೌದ್ರ ಕಾರಿದಳು. ಆ ಮೇಲೆ ಮಗುವನ್ನೆತ್ತಿಕೊಂಡು ಹೋಗಿ ಸಮಜಾಯಿಸಿದಳು. ಮುಖಭಂಗಹೊಂದಿದ ಇಸ್ಪೀಟು

ಗುಲಾಮರು ಬಿಚ್ಚಿದ ಪಿಡಿಕಟ್ಟಿದರು. ತುಂಬಿದ ಜನರೆದುರು ತಾವೂ ಮರುಮಾತೆತ್ತಿದರೆ ಹೇಸಿಗೆಯಾಗಬಹುದೆಂದು ತುಟಿ ಎರಡು ಮಾಡ ದೆದ್ದರು. "ಏನೋ ಮಗುವಿನ ಮೇಲಿರುವ ಮಮತೆಯಿಂದ ನಿಮ್ಮದು ಪ್ರಮಾದವಾಗಿದ್ದರೂ ಬೈದುಬಿಟ್ಟಳು. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿ ಕೊಳ್ಳಬೇಡಿ ಬನ್ನಿರಿ. ನಿಮಗೆ ಯಾರ ರಗಳೆಯೂ ಇಲ್ಲದ ಜಾಗ ತೋರಿಸುವೆ" ಎಂದು ಕೃಷ್ಣಭಟ್ಟರವರನ್ನು ಬೇರೆಡೆ ಕರಕೊಂಡು ಹೋಗಿ ಉತ್ತಮವಾದೊಂದು ಸ್ಥಳದಲ್ಲಿ ಹಸೆ ಹರಡಿ ಕುಳ್ಳಿರಿಸಿದರು. ಚಿಕ್ಕ ಸೀಮೆಯೆಣ್ಣೆಯ ದೀಪವೊಂದನ್ನು ತಂದಿರಿಸಿದರು. "ಕೆಲಸದ ಭಾರ ತುಸು ಕಡಿಮೆಯಾದಾಗ ಬಂದು ನಿಮ್ಮೊಡನೆ ಕೂಡಿಕೊಳ್ಳುವೆ ನೆಂದು ಕೃಷ್ಣಭಟ್ಟರವರನ್ನು ಬೀಳ್ಕೊಂಡರು.

ದಿಬ್ಬಣ ಎದುರುಗೊಂಡು ಸ್ನಾನ ಸಂಧ್ಯಾವಂದನಾದಿಗಳು ಪೂರೈ ಸಿದ ನಂತರ ಬರುವವರು ಸಾಮಾನ್ಯ ಬಂದಾದ ಮೇಲೆ ಊಟದ ಉಪ ಚಾರವಾಯಿತು. "ಅಡುಗೆ ಬಲು ಚಲೋದಾಗಿದೆ. ಲಾಡು, ಹೋಳಿಗೆ, ಪಾಯಸ, ಪರಮಾನ್ನ ಧಾರಾಳ. ಬೇಡ ಬೇಡವೆಂದರೂ ಇಕ್ಕಿ ಎಲೆ ಯಲ್ಲಿ ಧಾರಾಳ ಉಳಿಯುವಂತೆ ಮಾಡಿದ್ದಾರೆ" ಎಂದು ಮುದುಕರು ಊಟವನ್ನು ಹೊಗಳಿದರು. ಊಟ ಕಳೆದ ನಂತರ ಜಾಗ ಕಡಿಮೆ ಯೆಂದು ತೆರಳುವವರೆಲ್ಲ ತೆರಳಿದರು. ಅತ್ಯಗತ್ಯ ನಿಲ್ಲಬೇಕಾಗಿ ಬಂದ ವರು ಮಾತ್ರ ಉಳಿದರು. ಆಗ ಉಯ್ಯಾಲೆಯಲ್ಲಿ ಧಾರಾಳ ಸ್ಥಳ ವಾಯಿತು. ಇಸ್ಪೀಟಾಟ ಉಯ್ಯಾಲೆಯಲ್ಲಿಯೇ ಲೈಟಿನ ಬೆಳಕಿನಲ್ಲಿ ಜರಗಿತು. ಎಲ್ಲರಿಗೂ ಬೀಡಿ ಸಿಗರೇಟು ಹಂಚಿ ಕೃಷ್ಣ ಭಟ್ಟರು ಆಟದ ಕಳದಲ್ಲಿ ಸೇರಿದರು. ಕೆಲವರು ಸಿದ್ರಿಸತೊಡಗಿದರು. ಕೆಲವರು ಹರಟೆ ಹೊಡೆಯತೊಡಗಿದರು. ಹಲಬರು ವೀಳ್ಯದೆಲೆ ಹರಿವಾಣ ಎದುರಿರಿಸಿ ವೀಳ್ಯ ಜಗಿಯುತ್ತಾ ಊರ ಪರವೂರ ವರ್ತಮಾನಗಳನ್ನು ಚರ್ಚಿಸತೊಡಗಿದರು. ಅಂತೂ ಸ್ವಲ್ಪ ಸಮಯ ಕಳೆದ ನಂತರ ವಿವಾಹ ಕ್ರಿಯೆಯ ಏರ್ಪಾಡಾಯಿತು. ಭವ್ಯವಾದ ತಳಿರು ತೋರಣ ಗಳಿಂದಲಂಕರಿಸಿದ ಪಟ್ಟೆ ಶಾಲಿನ ಮೇಲ್ಕಾಪು ಹೊದಿಸಿದ ಚಿತ್ರವಿಚಿತ್ರ

ಗಳಿಂದಲಂಕರಿಸಲಾದ ಮಂಟಪದಲ್ಲಿ ಉಭಯ ವರ್ಗದ ಪುರೋಹಿತರೂ ಮದುವೆ ಮಾಡಿಸುವವರೂ ಮಾಡಿಸಿಕೊಳ್ಳತಕ್ಕವರೂ ನೆರೆದರು. ಸಿಡಿಮದ್ದು ಸುಟ್ಟ ದನಿ ಕಿವಿ ಕಿವುಡಾಗಿಸಿತು ಗುರಿಕಾರರು, ಊರ ಆಢ್ಯ ಮಹನೀಯರು, ಮಂಟಪದೆದುರು ಇಕ್ಕಡೆಗಳಲ್ಲೂ ಎದುರುಎದುರಾಗಿ ಕಾಲ ಮೇಲೆ ಕಾಲು ಹಾಕಿ ಕುಳಿತರು. ಪದ್ಮನಾಭ ಭಟ್ಟರು ಗಂಧ, ಅಕ್ಷತೆ, ಪನ್ನೀರು, ಮೊದಲಾದುವನ್ನು ಮಂಟಪದಲ್ಲಿ ತಂದಿರಿಸಿದರು. ಅಗರುಬತ್ತಿ ಹಚ್ಚಿ ಆಢ್ಯಮಹನೀಯರೆದುರಿರಿಸಿದರು. ಕೃಷ್ಣ ಭಟ್ಟರು ಕುಳಿತವರ ಮೇಲೆ ಮಳೆ ಬಂದು ಒದ್ದೆಯಾದುದು ಸಾಲದುದಕ್ಕೆ ಪನ್ನೀರೆರಚಿದರು, ಸೆಂಟು ಸವರಿದರು. ಹಣ್ಣು ಹಣ್ಣು ಮುದುಕರನ್ನು ನೋಡಿ ಹೆಗಲಲ್ಲಿಕ್ಕಿದ ಧೋತರ ತೆಗೆಯಿಸಿ ಗಂಧಲೇಪನ ಮಾಡಿದರು. ವಿವಾಹ ಮುಹೂರ್ತ ಸಮೀಪಿಸಿತು. ವಾದ್ಯಮೊಳಗುತ್ತಿತ್ತು. ಹೆಂಗಸರ ಶೋಭಾನೆ ಒಂದರ ಮೇಲೊಂದು ಗ್ರಾಮಫೋನ್ ರಿಕಾರ್ಡಿನಂತೆ ಸಾಗುತಿತ್ತು. ಪುರೋಹಿತರು ಘಟ್ಟಿಯಾಗಿ ಮಂತ್ರವನ್ನುಚ್ಚರಿಸಿದರು. ಅಲ್ಲಿ ಇಲ್ಲಿ ಗಂಡಿನ ಕಡೆಯವರೂ ಹೆಣ್ಣಿನ ಕಡೆಯವರೂ ಬೆಳ್ಳಿ (ಮೂರಾಣೆ) ಹಂಚಿದರು. ನೆರೆ ಸೀರೆ ಹಿಡಿದರು. ಕ್ರಮಪ್ರಕಾರ ಕ್ರಿಯೆಗಳೆಲ್ಲಾ ಸಾಗತೊಡಗಿದುವು. ಸಾವಿತ್ರಿ ಹಾಗೂ ಗಜಾನನ ಭಟ್ಟರು ಅನ್ಯೋನ್ಯ ಹೂಮಾಲೆ ಹಾಕಿಕೊಂಡರು. ಮದುವೆ ವಿಜೃಂಭಣೆಯಿಂದ ಕಳೆಯಿತು. ಮದುವೆ ಕಳೆದನಂತರ ಹೆಣ್ಣಿನ ಮನೆಯಲ್ಲಾಗ ತಕ್ಕ ಕೆಲಸಗಳೆಲ್ಲಾ ತೀರಿದನಂತರ ಶುಭದಿನದಲ್ಲಿ ಗಜಾನನ ಭಟ್ಟರಲ್ಲಿ ಗೃಹಪ್ರವೇಶವೂ ನಡೆಯಿತು. ತದನಂತರ ವಾಸುದೇವ ಭಟ್ಟರಲ್ಲಿ ಅಳಿಯ ಮಕ್ಕಳಿಗೆ ಜರಗತಕ್ಕ ಔತಣವೂ ಭಾವಭಾವಂದಿರ ಸರಸ ಸಮ್ಮೇಳನಗಳೂ ಮುಗಿದನಂತರ ಸಾವಿತ್ರಿ ಗಂಡನ ಮನೆಗೆ ಪತಿಯೊಂದಿಗೆ ಹೊರಡಲನುವಾದಳು. ತಾಯಿ ಗಂಗಮ್ಮ ಕಣ್ಣಲ್ಲಿ ನೀರು ತಂದು ಮಗಳನ್ನು ಹರಸಿ ಬೀಳ್ಕೊಟ್ಟಳು. ವಾಸುದೇವ ಭಟ್ಟರು ಶುಭವನ್ನು ಕೋರಿದರು. ಭಾವಂದಿರು ಭಾವನನ್ನೂ ತಂಗಿಯನ್ನೂ ನಕ್ಕುನಗಿಸಿ ಆನಂದಪೂರ್ವಕ ಬೀಳ್ಕೊಟ್ಟರು. ಗಜಾನನ ಭಟ್ಟರು ಎಲ್ಲರಿಗೂ ಕಿವಿಗಿಂಪಾಗುವಂತೆ ನುಡಿದು ಮನೆಯೆಡೆಗೆ ತೆರಳುವೆನೆಂದರು. ಪದ್ಮನಾಭ

ಭಟ್ಟರು ತಂಗಿಯ ಮನೆಗೆ ಭಾವನೊಂದಿಗೆ ಹೊರಡಬೇಕಾಯಿತು. ಭಾವನೊಂದಿಗೆ ತಂಗಿಯ ಮನೆಯಲ್ಲಿ ನಾಲ್ಕು ದಿನವಿದ್ದು ಸುಖವಾಗಿ ದಿನಗಳೆದು ಮನೆಯೆಡೆಗೆ ಬಂದರು. ಎಲ್ಲರೂ ತಂತಮ್ಮ ಕಾರ್ಯ ಗಳಲ್ಲಿ ಪ್ರವೃತ್ತರಾದರು.

## ಸುಳಿ ೨

ಒಂದೊಂದೇ ಕ್ಲಾಸುಗಳಲ್ಲಿ ಸರ್ವೀಸು ಮಾಡುತ್ತಾ ಮುಂದರಿದ ಕೃಷ್ಣ ಭಟ್ಟರು ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಹಣ ಕಟ್ಟಿದರು. ಪರೀಕ್ಷೆಯೂ ಕಳೆಯಿತು. "ಚೆನ್ನಾಗಿ ಬರೆದಿದ್ದೇನೆ ಪಾಸಾಗಲು ಏನೂ ತೊಂದರೆಯಿಲ್ಲ" ಇತ್ಯಾದಿಯಾಗಿ ಕೃಷ್ಣ ಭಟ್ಟರು ಬಡಾಯಿ ಕೊಚ್ಚಿ ಕೊಳ್ಳುತ್ತಿದ್ದರು. ಪಾಸಾಗಲಾರೆನೆಂಬುದು ದೃಢವಾಗಿ ಗೊತ್ತಿದ್ದರೂ ಎದುರದನ್ನು ತೋರ್ಪಡಿಸುತ್ತಿರಲಿಲ್ಲ. ಫಲಿತಾಂಶ ಬಂದಾಗ ಫೈಲೆಂದು ಎಲ್ಲರಿಗೂ ತಿಳಿಯಿತು. 'ಕವುಚಿ ಬಿದ್ದರೂ ಮೂಗು ಮೇಲೆ' ಎಂಬ ನಾಣ್ಣುಡಿಯಿದೆಯಷ್ಟೆ. "ಓದಿನೋಡಿ ಮಾರ್ಕು ಹಾಕಿದುದಾಗಿದ್ದರೆ ಪಾಸಾಗಲೇಬೇಕಿತ್ತು. ಏನೂ ಓದದವರು ದಡ್ಡರು—ನನ್ನ ಸಹಪಾಠಿ ಗಳು ಪಾಸಾಗಿದ್ದಾರೆ. ಒಟ್ಟಾರೆ ಅವರವರ ಅದೃಷ್ಟ. ಪರೀಕ್ಷಕರು ಪೇಪರು ತಿದ್ದುವಾಗ ಸಂಸಾರ ತಾಪತ್ರಯದಿಂದವರ ತಲೆಬಿಸಿಯಾಗಿ ದ್ದರೆ ಸಾಕಲ್ಲ; ಉತ್ತರವನ್ನೆಷ್ಟು ಚೊಕ್ಕವಾಗಿ ಬರೆದಿದ್ದರೂ ಅದೊಂದೂ ಅವರ ಕಣ್ಣಿಗೆ ಕಾಣಿಸದು. ಮಾರ್ಕು ಸಿಗದು. ಹೇಗೆ ಬರೆದರೂ ಆಗ ಅದು ಅವರಿಗೆ ಶುದ್ಧ ತಪ್ಪಾಗಿ ಕಾಣುವುದು. ಪಾಪ! ಆ ವಿದ್ಯಾರ್ಥಿ ಎಷ್ಟೊಂದು ರಾತ್ರಿ ನಿದ್ದೆಗೆಟ್ಟು ತಲೆಕರಡು ಮಾಡಿರುವ ನೆಂದು ಅವರಿಗರಿಯುವುದೇ? ಪರೀಕ್ಷೆಯಲ್ಲಿ ಜಯಶೀಲನಾಗಬೇಕಾ ದರೂ ತಲೆಬರಹ ಚೆನ್ನಾಗಿರಬೇಕು" ಎಂದು ಕೃಷ್ಣ ಭಟ್ಟರು ತಂದೆ ತಾಯಿಗಳಿಗೂ ತಮ್ಮಂದಿರಿಗೂ ಬುದ್ಧಿವಂತರೆಂಬಂತೆ ಹೇಳಿ ಬೋಧಿ ಸುತ್ತಿದ್ದರು. ಗುಟ್ಟರಿಯದವರು ಹೌದೆಂದು ತಿಳಿಯುತ್ತಿದ್ದರು. ಇನ್ನೊಮ್ಮೆ ನೋಡುವ, ಮತ್ತೊಮ್ಮೆ ನೋಡುವ, ಎಂದು ಪರೀಕ್ಷೆಯ ಪ್ರವೇಶಗಳನ್ನೆಲ್ಲಾ ಮುಗಿಸಿಯಾದರೂ ಫಲವಿಲ್ಲದಾಯಿತು.

ಪರಭಾಷೆ ಇಂಗ್ಲೀಷು. ಅದನ್ನು ಕಲಿತು ತೇರ್ಗಡೆ ಪಡೆಯುವು ದೆಂದರೆ ಸುಲಭ ಸಾಧ್ಯವೇ? ಹೇಗೂ ಸಾಧ್ಯವಾಗುವುದಿಲ್ಲವೆಂದಾಯಿತು. ಕೃಷ್ಣ ಭಟ್ಟರಿಗೆ ಇನ್ನದರ ಗೋಜಿಗೆ ಹೋಗುವುದೇ ಬೇಡ; ಪಾಸಾಗ ದಿದ್ದರೆ ಅಷ್ಟೇ ಹೋಯಿತು; ಕಲಿತ ಅನುಭವವೆಲ್ಲಿಗೂ ಹೋಗಲಾರ ದಷ್ಟೆ; ಎಷ್ಟೆಂದರೂ ನಮ್ಮೂರ ಮಟ್ಟಿಗೆ ಇಂಗ್ಲೀಷು ಹೆಚ್ಚು ಕಲಿತ ಅನುಭವಶಾಲಿಯುವನೊಬ್ಬನೇ ಅಲ್ಲವೇ? ಇನ್ನು ಮನೆ ಕಾರ್ಯಭಾರ ನೋಡಲಿ?" ಎಂದು ವಾಸುದೇವ ಭಟ್ಟರು ಕೃಷ್ಣಭಟ್ಟರನ್ನು ಮನೆಯ ಲ್ಲಿರಿಸಿಕೊಂಡರು.

ಪೇಟೆಯಿಂದ ಮನೆಗೆ ಬಂದ ಕೃಷ್ಣ ಭಟ್ಟರಿಗೆ ಹಳ್ಳಿಯ ವಾತಾವರಣ ಒಗ್ಗದಾಯಿತು. ಕಲಿತು ಪಾಸಾಗಿದ್ದರೆ ಮುಂದರಿಸ ಬಹುದಿತ್ತು "ಆ ಹಾಳು ಪರೀಕ್ಷಕರು ಹಲವು ಬಾರಿ ಪರೀಕ್ಷೆಗೆ ಕುಳಿತ ನನ್ನಲ್ಲಿ ಕರುಣೆದೋರಿ ಕಟ್ಟಕಡೆಗಾದರೂ ಪಾಸುಮಾಡಲಿಲ್ಲವಲ್ಲ." ಎಂದು ಶಪಿಸತೊಡಗಿದರು. ಆದರೇನು ಮಾಡುವುದು. ಮನೆಯಲ್ಲಿ ರದೆ ಬೇರೆ ವಿಧಿಯಿಲ್ಲ. ಜಾಡ್ಯಮುಸುಕಿತು. ರಾತ್ರಿ ನಿದ್ದೆ ಮಾಡಿ ದರೆ ಬೆಳಗ್ಗೆ ಎಂಟು ಎಂಟೂವರೆ ಘಂಟೆ ಹೊರತು ಹಾಸಿಗೆ ಬಿಟ್ಟೇಳ ದಾದರು. ಎದ್ದು ಮುಖತೊಳೆದು ಸ್ನಾನ ಮಾಡಿ ಗಂಜಿಯೋ ಕಾಫಿಯೋ ಏನಾದರೂ ಸೇವಿಸಿದನಂತರ ಒಮ್ಮೊಮ್ಮೆ ಪುಸ್ತಕ ಬಿಡಿಸಿ ಹಿಡಕೊಳ್ಳುವರು. ಇಲ್ಲವಾದರೆ "ಏನೋ ಒಂದು ರೀತಿಯಾಗುತ್ತಿದೆ" ಯೆಂದು ಹಾಸಿಗೆ ಬಿಡಿಸಿ ಮುಸುಕೆಳೆದುಕೊಳ್ಳುವರು. ಅಪರಾಹ್ನ ಪೇಟೆಯ ವೇಷಭೂಷಣ ಧರಿಸಿ ರಸ್ತೆಯ ಬದಿಗೆ ವಾಯುಸೇವನೆಗೆ ಹೊರಡುವರು. ಕೃಷ್ಣ ಭಟ್ಟರ ಹಿರಿತನದ ವೇಷಕಂಡಾಗ ಹರಟೆ ಹೊಡೆಯಲು ಜನಬೇಕೆನ್ನುವಷ್ಟು ಸಿಗಧಿರುವರೇ? ಬರುವಾಗ ಸಾಯಂ ಕಾಲ. ಈ ರೀತಿಯ ಕೃಷ್ಣ ಭಟ್ಟರ ವರ್ತನೆ ವಾಸುದೇವ ಭಟ್ಟರಿಗೆ ಹಿಡಿಸದಾದರೂ "ಪಾಪ! ಫೈಲಾದ ಬೇಜಾರ. ಪೇಟೆಯಲ್ಲಿ ಜನ ಸಮೂಹದೊಡನಿದ್ದವನಿಗೆ ಬೇಸರವಾಗುತ್ತಿದೆಯಾಗಿರಬಹುದು; ಕೆಲವೇ ದಿನಗಳಲ್ಲಿ ಎಲ್ಲವೂ ಸರಿಯಾಗಬಹುದು. ಈಗಲೆ ಕುಗ್ಗಿದ ಮನಕ್ಕೆ ಬರೆಯೆಳೆಯುವುದು ಬೇಡ" ಎಂದು ಸಮಾಧಾನಪಟ್ಟುಕೊಳ್ಳುತ್ತಿದ್ದರು.

ತಿಂಗಳೊಂದು ಕಳೆದರೂ ಕೃಷ್ಣಭಟ್ಟರು ತಮ್ಮೊಡನೆ ಸಹಕರಿಸದೆ ಕಾಲ ಹರಣ ಮಾಡುತ್ತಿರುವುದು ವಾಸುದೇವ ಭಟ್ಟರಿಗೆ ಸಹಿಸಲಸದಳ ವಾಯಿತು. "ಏನು ಇಂಗ್ಲೀಷು ಕಲಿತರೆ ಅವರವರ ನಿತ್ಯದ ಕಸಬಿಗೆ ತಿಲಾಂಜಲಿ ಈಯಬೇಕೇ? ಹೀಗೆ ಕಾಲುನೀಡಿ ಕುಳಿತರೆ ಹೊಟ್ಟೆ ತುಂಬುವುದೆಂತು? ಜೀವನ ಸಾಗುವುದೆಂತು? ಆಗದು ಎಚ್ಚರಿಸುವೆನು, ಮಗ ಕೃಷ್ಣ ಭಟ್ಟನನ್ನು ಕೃಷಿಗೆ ಕೈಯಿಕ್ಕುವಂತೆ ಪ್ರೇರೇಪಿಸುವೆನು" ಎಂದು ಮನದಲ್ಲಂದುಕೊಂಡರು.

ವಾಸುದೇವ ಭಟ್ಟರು ಒಂದು ದಿನ ರಾತ್ರಿ ಊಟ ಕಳೆದ ಮೇಲೆ ಆರಾಮವಾಗಿ ಕುಳಿತರು. ವೀಳ್ಯವೆಲೆ ಜಗಿಯತೊಡಗಿದರು. ಕೃಷ್ಣ ಭಟ್ಟರನ್ನು ನನಿಯಕ್ಕೆ ಕರೆದರು ಮಾತುಕತೆಗೆ ಸುರು ಹಚ್ಚಿದರು. "ಮಗೂ ಕೃಷ್ಣಾ! ನೀನೀಗ ದೊಡ್ಡವನಾದೆ. ಪ್ರಾಯ ಭರಿತನಾದೆ. ಪ್ರಾಯ ಇಪ್ಪತ್ತಮೂರು ಮೀರಿತು. ನೀನು ಸ್ವತಃ ಸಂಪಾದಿಸಿ ಉಣ್ಣುವ ಮಟ್ಟಕ್ಕೆ ಯಾವಾಗಲೇ ಬಂದಿರುವೆ. ನೋಡು, ನನಗೆ ಪ್ರಾಯ ಹದಿನಾರು ವರ್ಷ ತುಂಬಿದಾಗ ತಂದೆಯವರು ನಿನ್ನಜ್ಜ ಇಹ ಲೋಕ ಬಿಟ್ಟಿದ್ದರು. ನನಗಾಶ್ರಯ ಕೊಡುವವರಾರೂ ಇರಲಿಲ್ಲ. ಚಿಕ್ಕಪ್ಪ ದೊಡ್ಡಪ್ಪಂದಿರು ಕೈಕೊಡುವಂತಿರಲಿಲ್ಲ. ತಂದೆಯವರಿರು ವಾಗಲೇ ಅವರು ಅಷ್ಟಕ್ಕಷ್ಟೇ ಆಗಿದ್ದರು. ಅನಂತರ ನಾನೇ ಸ್ವತಃ ಶ್ರಮವಟ್ಟು ಹೆತ್ತವರು ಸಂಪಾದಿಸಿಟ್ಟ ಎರಡೂವರೆ ಮುಡಿಗದ್ದೆಗಳಲ್ಲಿ ಗೈದು ಸಿಕ್ಕಸಿಕ್ಕವರ ಕೈಕಾಲು ಹಿಡಿದು ಪಡಲಾಗದ ಬನ್ನಪಟ್ಟು ಹೇಗೂ ಸುಧಾರಿಸಿ ಈಗ ಈ ರೀತಿ ಆಗಿರುವೆ. ಸತತವೂ ಉದ್ಯಮ ಶೀಲನಾದವನಿಗೆ ಅಭಿವೃದ್ಧಿ ನಿಶ್ಚಯ. ಜೀವನೋಪಾಯಕ್ಕೆ ಹಲವಾರು ಬಗೆಯ ವೃತ್ತಿಗಳಿದ್ದರೂ ಎಲ್ಲಾ ಉದ್ಯೋಗಗಳಿಗಿಂತಲೂ ಈ ಕೃಷಿ ಯಷ್ಟು ಉತ್ತಮವಾದುದು ಇನ್ನೊಂದಿಲ್ಲ. ಬಾಕಿ ವೃತ್ತಿಗಳಿಗಾದರೆ ಪರರ ಹಂಗಿದೆ. ಇನ್ನೊಬ್ಬರಿಗೆ ತಲೆತಗ್ಗಿಸಿ ಬಾಲವಲ್ಲಾಡಿಸಿ ನಡೆಯ ಬೇಕು. ಕೃಷಿಕನಿಗೆ ಪರರ ಹಂಗಿಲ್ಲ. ಕೃಷಿಯೆಂದರೆ ಭೂಮಾತೆಯ ಮಡಿಲಲ್ಲಿ ನೇಪೆಗೈಯುವುದು. ತಾನು ಗೈಯುವುದು ತಾನು ಉಣ್ಣುವುದು. ಮಿಗಿತ ಉಳಿದುದನ್ನು ಬೇರೆಯವರಿಗುಣ್ಣಿಸುವುದು.

ಬದುಕಬೇಕಾದರೆ ಉಣ್ಣಬೇಕು. ಉಣ್ಣಬೇಕಾದರೆ ಆಹಾರದ ಭಾಗ್ಯ ಬೇಕು. ಆದ್ದರಿಂದ ಕೃಷಿಯೇ ಎಲ್ಲಾ ಜನರಿಗೂ ಜೀವನೀಡುವ ಸಾಧನ. ಕೃಷಿಯೇ ಜಗತ್ತಿನ ತಾಯಿಬೇರು. ಕೃಷಿಯೆಂದರೆ ಒರತೆ ನೀರಿನ ಹಾಗೆ. ಒರತೆ ನೀರು ತೆಗೆದಷ್ಟೂ ಮುಗಿಯುವಂತಿಲ್ಲ. ಮತ್ತೂ ಮತ್ತೂ ಹೆಚ್ಚುತ್ತಿರುವಂತೆ ಕೃಷಿಯ ಉತ್ಪತ್ತಿ ತಿನ್ನುತ್ತಾ ದುಡಿಯುತ್ತಾ ಹೋದಲ್ಲಿ ಮತ್ತೂ ಮತ್ತೂ ಹೆಚ್ಚುತ್ತಲೇ ಇರುವುದು. 'ಕೃಷಿತೋ ನಾಸ್ತಿ ದುರ್ಭಿಕ್ಷಮ್' ಎಂದು ಹಿರಿಯರಾಡಿದ ಮಾತನ್ನರಿಯೆಯಾ? ಎಂದು ಉತ್ಸಾಹಪೂರ್ವಕ ಉಪದೇಶವೀಯುತ್ತಾ ಕೃಷ್ಣ ಭಟ್ಟರ ಮೊಗವನ್ನೊಮ್ಮೆ ನೋಡಿದರು.

ಕೃಷ್ಣ ಭಟ್ಟರು ಮೌನವಾಗಿ ತಲೆತಗ್ಗಿಸಿ ನೆಲವನ್ನೇ ನೋಡುತ್ತಿದ್ದರು. ಅವರ ಭಾವಭಂಗಿ ಕಂಡಾಗ ಈ ಮಾತು ಮನಕ್ಕಂಟಿದಂತೆ ಕಾಣುತ್ತಿರಲಿಲ್ಲ. "ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ' ಎಂಬ ನುಡಿಯಂತಾಯಿತಲ್ಲಾ ಎಂದು ವಾಸುದೇವ ಭಟ್ಟರಿಗೆ ಕೋಪ ಉಕ್ಕಿ ಬಂದಿತು. "ಏನು ಉಸಿರು ಸಹ ಒಂದಿಷ್ಟು ಹಂದಾಡದೆ ನಿರ್ಲಕ್ಷ್ಯಭಾವದಿಂದ ಕೋಣನಂತೆ ಕುಳಿತಿರುವೆ? ಇಂಗ್ಲೀಷು ಕಲಿತವನಿಗೇನು ಉಪದೇಶವೀಯುತ್ತಿರುವರೆಂದು ಬಗೆದೆಯಾ? ನಿಮ್ಮ ಓದಿಗೆಲ್ಲಾ ಮಣ್ಣು ಹಾಕಲಿ. ಓದಿಓದಿ ಪುಸ್ತಕದ ಬದನೆಕಾಯಿಯಿಂದ ಗೊಜ್ಜು ಮಾಡಿದ್ದುಂಟೇ? ಮುಖ್ಯ ಬೇಕಾದುದು ಅನುಭವ. ಅನುಭವಿಗಳ ಅನುಭವಸಾರವೇ ಪುಸ್ತಕಗಳಲ್ಲಿರುವುದಲ್ಲದೆ ಮತ್ತೇನೂ ಇಲ್ಲ. ಓದು ಮಾತ್ರ ಇದ್ದರೆ ಸಾಲದು. ಓದಿನೊಂದಿಗೆ ಲೋಕವರಿಜ್ಞಾನವೂ ಬೇಕು. ಅದಿಲ್ಲವಾದರೆ ಮರಬಿಟ್ಟ ಮಂಗನ ಹಾಗೆ. ಓದಿದರೆ ಕುರ್ಚಿಯಲ್ಲಿ ಕುಳಿತು ಪುಸ್ತಕ ತೆರೆದು ಮಕ್ಕಳ ಕಿವಿ ಹಿಂಡಿ ಬೆತ್ತ ತಿರುಗಿಸುವ ಕೆಲಸವೊಂದೇ ಮಾಡಬಲ್ಲಿರಿ ತರೆ ಸಾಲದು. ಕಲಿತರೆ ಬರಿಯ ಉದ್ಯೋಗ ಮಾತ್ರ ಮಾಡಬಹುದು. ಎಲ್ಲರೂ ಓದು ಬರಹ ಕಲಿತಾಗ ಬಾಯಿಗೆ ಮಣ್ಣಾದೀತು. ಹುಡಿಧೂಳು ಮುಕ್ಕಿಕೊಳ್ಳಬೇಕು. ಏನು ನಿನ್ನಭಿಪ್ರಾಯ? ಬಾಯಿತೆರೆದು ಸ್ಪಷ್ಟ ಹೇಳಿಬಿಡು" ಎಂದು ವಾಸುದೇವ ಭಟ್ಟರು ರೇಗಿ ನುಡಿದರು.

"ಅಪ್ಪಾ ನೀವು ಸಿಟ್ಟಾಗಬಾರದು. ಆದರೆ ನನ್ನಭಿಪ್ರಾಯ ತಿಳಿಸುವೆ" ಎಂದರು ಕೃಷ್ಣ ಭಟ್ಟರು.

"ಆಯಿತು. ಸಿಟ್ಟುಗಿಟ್ಟು ಏನೂ ಇಲ್ಲ. ಮಾತನಾಡದಿದ್ದರೆ ಬರುತ್ತದೆ ನನಗೆ ಸಿಟ್ಟು, ಧಾರಾಳ ಹೇಳು" ಅಂದರು ವಾಸುದೇವ ಭಟ್ಟರು.

"ಅಪ್ಪಾ! ನೀವೆಂದನುಡಿಗಳನ್ನು ಅಕ್ಷರಶಃ ಸತ್ಯವೆಂದೊಪ್ಪಿಕೊಳ್ಳಬೇಕು. ಆದರೆ ನಾನು ನನ್ನ ಸ್ವಂತ ಅಭಿಪ್ರಾಯವನ್ನು ಹೇಳುತ್ತೇನೆ. ನಾನರಿತ ಮಟ್ಟಿಗೆ ಈ ಕೃಷಿಯೆಂದರೆ ಇತರ ಜೀವನೋಪಾಯಗಳಿಲ್ಲದಾಗ ನಿರಕ್ಷರಕುಕ್ಷಿಗಳು ಕೈಗೊಳ್ಳುವ ಒಂದು ಉದ್ಯೋಗ. ಹಗಲಿರುಳೆನ್ನದೆ ಗಾಣದೆತ್ತಿನಂತೆ ದುಡಿದು ಹೊಟ್ಟೆಹೊರೆಯುವ ವೃತ್ತಿ. ಕೃಷಿ ಮಾಡುವ ರೈತನಿಗೆ ಶುಚಿಯಾಗಿರಲು ಸಾಧ್ಯವೇ ಇಲ್ಲ. ಗೊಬ್ಬರ ಹೊತ್ತು ಮಣ್ಣು ಅಗೆದು ಸೊಪ್ಪುಸದೆ ತಂದು ಮೈ ಕೈಯೆಲ್ಲಾ ಹೊಲಸು. ಈ ಅಲ್ಪಜ್ಞರಾದ ರೈತರು ವರ್ಷಗಟ್ಟಲೆ ದುಡಿದುಗಳಿಸಿದುದನ್ನು ತಿಳಿದ ನಾಗರಿಕರು ಪೇಟೆಯವರು ಕುಳಿತಲ್ಲಿಂದಲೇ ನಿಮಿಷದಲ್ಲಿ ಕಣ್ಣುಮುಚ್ಚಿ ತೆರೆಯುವುದರೊಳಗೆ ನುಂಗಿಬಿಡುತ್ತಾರೆ. ನೋಡಿರಿ ಹತ್ತೈವತ್ತು ಜನರಿಗೆ ಕೃಷಿಯಿಂದ ಸಿಗುವ ಲಾಭವನ್ನು ಅಂಗಡಿಯ ಮುಂಡದಲ್ಲಿ ಮುಂಡಿಸಿದ ಕವಿಸ್ತಿಗಳು ಅಥವಾ ಇನ್ನಾರಾದಾರೂ ವ್ಯಾಪಾರಿಗಳು ಒಂದೇ ಒಂದು ದಿನದಲ್ಲಿ ಸಂಪೂರ್ಣ ಸಂಪಾದಿಸಿಬಿಡುತ್ತಾರೆ. ಕೃಷಿ, ಕೈಗಾರಿಕೆ, ಕುಶಲೋದ್ಯೋಗಗಳು ಒಂದರ ಮೇಲೆ ಮತ್ತೊಂದು ಮೇಲ್ಮಟ್ಟಿನವು. ನಮ್ಮ ಹಿಂದೂದೇಶದವರು ಈ ರೀತಿಯ ಮೂಢರೈತರಾದುದರಿಂದ ವ್ಯವಹಾರ ಕುಶಲರಾದ ವ್ಯಾಪಾರಕ್ಕೆ ಬಂದ ಬ್ರಿಟಿಷರಿಗೆ ದೇಶ ಬಿಟ್ಟುಕೊಡಬೇಕಾಯಿತು. ಅವರ ಕಾಲಡಿಯಲ್ಲಿ ಹೊರಳಬೇಕಾಯಿತು. ಈಗವರು ನಮ್ಮನ್ನಾಳುತ್ತಾರೆ. ಎಂದರು ಕೃಷ್ಣಭಟ್ಟರು (ಆ ಕಾಲ ನಮ್ಮನ್ನು ಬ್ರಿಟಿಷರಾಳುತ್ತಿದ್ದರು.)

ತಮ್ಮಭಿಪ್ರಾಯಕ್ಕೆ ವಿರೋಧವಾಗಿ ನುಡಿಯುತ್ತಿರುವ ಕೃಷ್ಣಭಟ್ಟರ ನುಡಿಕೇಳಿ ವಾಸುದೇವ ಭಟ್ಟರು ನಖಶಿಖಾಂತ ಉರಿದೆದ್ದರು.

“ಇದಕ್ಕೇ ಕಲಿಕಾಲವೆಂದೆನ್ನುವುದು. ನಮ್ಮ ನಮ್ಮ ವೃತ್ತಿಯನ್ನು ಕಡೆಗಣಿಸಿ ಬಿಟ್ಟು ಇನ್ನೊಬ್ಬರ ವೃತ್ತಿಗೆ ಮನಸೋಲುವ ನಿನ್ನಂತಹ ಕಲಿಪುರುಷರಿಂದಾಗಿಯೇ ಜಾತಿ ನೀತಿಯಿಲ್ಲದ ಸಮುದ್ರದಾಚೆಯ ಫರಂಗಿಯವರು ನಮ್ಮನ್ನಾಳುವಂತಾಯಿತು. ಆದ್ದರಿಂದಲೇ ದಿನೇ ದಿನೇ ಅಧರ್ಮ ಅನಾಚಾರಗಳಿಗೆ ನಾಗರಿಕತೆ ಎಂಬೊಂದು ಬಣ್ಣ ಬಳಿಯಲಾಗುತ್ತಿದೆ. ಒಳ್ಳೆಯ ಕಾಲವೆಲ್ಲ ಸಂದುಹೋಯಿತು. ರಾಮರಾಜ್ಯವೆನ್ನುವುದನ್ನು ಕೇಳಿಲ್ಲವೇ? ಹಿಂದೆ ನಮ್ಮಲ್ಲಿ ಈ ಬ್ರಿಟಿಷರಿಗಿಂತ ಅತ್ಯುತ್ಕೃಷ್ಟರಾದ ಅರಸುಗಳು ರಾಜ್ಯಭಾರ ಮಾಡಿಲ್ಲವೇ? ಏನೋ ಋಣಾನುಬಂಧದಿಂದ ಬ್ರಿಟಿಷರು ನಮ್ಮನ್ನಾಳುವಂತಾಯಿತಲ್ಲದೆ ನಮ್ಮ ಮೂಢತನವೂ ಅಲ್ಲ, ಅವರ ಜಾಣತನವೂ ಕಾರಣವಲ್ಲ. ನಮ್ಮ ಪುರಾಣಗಳು ಏನುಸುರುತ್ತಿವೆ ಗೊತ್ತೇ? ಹೀಗೆಯೇ ಅಧರ್ಮ ಹೆಚ್ಚಾಗಿ ಮ್ಲೇಚ್ಛಾಚಾರ ತುಂಬಿ ಭೂಭಾರವಾಗಲಿದೆ. ಆಗ ಕಲ್ಕ್ಯವತಾರವಾಗಲಿದೆ. ದುಷ್ಟಸಂಹಾರವಾಗಲಿದೆ. ಆಗ ಈ ಬ್ರಿಟಿಷರೂ ಇಲ್ಲ. ಅಥವಾ ಈ ವ್ಯಾಪಾರ ಮೊದಲಾದುವುಗಳಲ್ಲಿ ಹೆಚ್ಚು ಹಣ ಸಂಪಾದನೆಯೂ ಲಾಭವೂ ಇದ್ದರೂ ದೂರದ ಮಾವಿನ ಕಾಯಿಗಿಂತ ಹತ್ತಿರದ ಅಂಬಟೆ ಕಾಯಿಯೇ ಲೇಸು ಎಂದರಿತುಕೋ. ನಮಗೆ ವ್ಯಾಪಾರವೂ ಬೇಡ; ಮತ್ತೊಂದೂ ಬೇಡ. ಪಿತ್ರಾರ್ಜಿತ ಸೊತ್ತು ಆಸ್ತಿ ಇದೆ. ಯಾರ ರಗಳೆಯೂ ಇಲ್ಲದೆ ಇದ್ದುದನ್ನು ಸರಿಯಾಗಿ ನೋಡಿಕೊಂಡು ಮೈಮುರಿದು ಕೆಲಸ ಮಾಡಿದರೆ ಮೂರು ಹೊತ್ತು ಉಂಡು ತೇಗುವುದಕ್ಕೇನೂ ಕೊರತೆ ಬಾರದು. ಇದುವೇ ಉತ್ತಮ. ಎನ್ನುತ್ತಾ ವಾಸುದೇವ ಭಟ್ಟರು ಕೃಷ್ಣ ಭಟ್ಟರ ಮೊಗ ನೋಡಿದರು.

ವಾಸುದೇವ ಭಟ್ಟರಿಗೆದುರು ಹೇಳಿದರೆ ಕಾರ್ಯಸಾಧಿಸುವ ಹಾಗಿಲ್ಲ. ಕಬ್ಬಿಣವನ್ನು ಕಾಸಿ ಹದಪಡಿಸಿ ರೂಪಕ್ಕೆ ತಿರುಗಿಸುವಂತೆ ಅವರಭಿಪ್ರಾಯಕ್ಕೆ ಸಮ್ಮತಿಸಿದಂತೆ ನಟಿಸಿ ಕಾರ್ಯ ಸಾಧಿಸಬೇಕು. ತನ್ನ ಅಭಿಪ್ರಾಯಕ್ಕೆ ತಾತ ಸಮ್ಮತಿಸುವಂತೆಸಗಬೇಕು ಎಂದು ಬಗೆದು “ನೀವಂದುದನ್ನೆಲ್ಲಾ ನಾನೊಪ್ಪಿಕೊಳ್ಳುವೆ. ಶುದ್ಧ ತಿಳಿಗೇಡಿಯಾದವನೂ ಕೂಡ ನಿಮ್ಮ ಮಾತಿಗೆ ಸಮ್ಮತಿಸಲೇಬೇಕು. ಕೃಷಿಯೇ

ಸರ್ವಕ್ಕೂ ಮೂಲಾಧಾರ. ಹಣ ಸಂಪಾದನೆಗೆ ಮಾತ್ರ ಬೇರೆ ವೃತ್ತಿಗಳು ಇದಕ್ಕಿಂತ ಉತ್ತಮ ಮತ್ತು ಸುಲಭ ಎಂದೆನಲ್ಲದೆ ಕೃಷಿಯ ವಿಷಯದಲ್ಲಿ ನನಗೆ ದುರಭಿಪ್ರಾಯವಿಲ್ಲ" ಎಂದು ಕೃಷ್ಣ ಭಟ್ಟರು ಮೆಲ್ಲಗೆ ತಲೆ ತಗ್ಗಿಸಿ ನುಡಿದರು.

"ಹಾಗನ್ನು, ಉಣಲಿಲ್ಲವಾದರೆ ಹಣವೆಷ್ಟಿದ್ದರೂ ಏನು ಪ್ರಯೋಜನ? ಹಣ ತಿನ್ನಲಾಗುವುದೇ? ಈಗಲಾದರೂ ಅರಿಯಿತೇ? ನಮಗೆ ನಮ್ಮ ಜಮೀನಿದೆ. ಬೆವರನ್ನದರಲ್ಲಿ ನಾವಿಳಿಸಿದರೆ ಸಕಲಸುಖಸಂಪತ್ತುಗಳೂ ಒದಗಿ ಬರುವುವು. ನೀನು ಹೀಗೆ ಸೋಮಾರಿಯಾಗಿ ಅಲೆಯಬಾರದು. ದುಡಿಯಬೇಕು. ಕೈಕೆಸರಾದರೆ ಬಾಯಿ ಮೊಸರು. ಫೈಲಾದ ಚಿಂತೆ ಬಿಟ್ಟುಬಿಡು" ಎಂದು ವಾಸುದೇವ ಭಟ್ಟರೊಂದೇ ಉಸಿರಿಗುಸುರಿ ಬಿಟ್ಟರು.

ನಿಮ್ಮ ಎಲ್ಲಾ ಮಾತುಗಳನ್ನೂ ನಾನು ಶಿರಸಾವಹಿಸುತ್ತೇನೆ. ಜಮೀನಿನಲ್ಲಿ ದುಡಿಯಲು ನೀವಿರುವಿರಿ. ತಮ್ಮನಿದ್ದಾನೆ. ನನಗೆ ದುಡಿದು ಗೊತ್ತಿಲ್ಲ. ನಿಮ್ಮಂತೆ ದುಡಿಯುವ ಶಕ್ತಿ ನನ್ನಲ್ಲಿಲ್ಲ. ಜಮೀನಿನ ಮಟ್ಟಿಗೆ ನೋಡಿಕೊಳ್ಳಲು ನೀವೆಲ್ಲರಿರುವಾಗ ನಾನು ಹಣಗಳಿಸುವ ವೃತ್ತಿಯನ್ನವಲಂಬಿಸಿದರಾಗದೇ? ಹಣವೆಂದರೆ ಹೆಣವೂ ಬಾಯಿಬಿಡುವುದೆಂದಿರುವಾಗ ನಾವೂ ಹಣಗಳಿಸಿದರಾಗದೇ? ನಿವೃತ್ತಿಯಿಲ್ಲವಾದರೆ ಕೃಷಿಮಾಡಬೇಕು. ಈಗ ಹಾಗಲ್ಲ. ನೀವು ಹೂಂ ಅಂದರೆ ಸಾಕು. ನಾನು ನನ್ನ ಯೋಚನೆಯನ್ನನುಸರುವೆ."

"ಏನದು ನಿನಗೆ ಹೊಳೆದ ವಿಚಾರ?"

"ಈಗಿನದು ಯಂತ್ರಯುಗ. ಒಬ್ಬನು ಮಾಡುವುದಕ್ಕಿಂತ ಹತ್ತು ಪಾಲು ಕೆಲಸ ಹೆಚ್ಚು ಯಂತ್ರಗಳಿಂದಾಗುತ್ತದೆ. ಸಮಯವೂ ಉಳಿಯುತ್ತಿದೆ. ಶ್ರಮವೂ ಹೆಚ್ಚೊಂದು ಬೇಡ. ಈಗ ಸಾಮಾನುಗಳ ಸಾಗಾಟ ನಮ್ಮ ಹಳ್ಳಿಯಲ್ಲಿ ಎತ್ತುಗಳ ಗಾಡಿಯಿಂದೂ ತಲೆಹೊರೆಯಿಂದಲೂ ಸಾಗುತ್ತಿದೆ. ಹಳ್ಳಿಗಳಿಗೆ ವಾಹನಗಳು ಅಷ್ಟೊಂದು ಬಂದಿಲ್ಲ. ಜನಸಂಚಾರಕ್ಕೆ ಪೇಟೆಯಂತೆ ಬಸ್ಸುಗಳೂ ಇಲ್ಲ. ಆದುದ

ರಿಂದ ನಾನು ಡ್ರೈವಿಂಗ್ ಕಲಿಯಬೇಕೆಂದಿದ್ದೇನೆ. ಐದಾರು ತಿಂಗಳು ಗಳಲ್ಲಿ ವಾಹನ ನಡೆಸಲು ನಾನು ಕಲಿಯುವೆನು. ಆ ಮೇಲೆ ಸಾಮಾನ್ಯದ ಟೇಕ್ಸಿಯೊಂದನ್ನು ಕೊಳ್ಳಬೇಕು. ಈ ಊರಲ್ಲಿ ವಾಹನದ ಸಂಚಾರ ಸುರು ಹಚ್ಚಬೇಕು. ಟೇಕ್ಸಿಯಲ್ಲಿ ಸಿಕ್ಕಿದ ಲಾಭದಿಂದಲೇ ಲಾರಿಯೊಂದನ್ನು ಕೊಂಡುಕೊಳ್ಳಬೇಕು. ಹಳ್ಳಿಯ ಅಡಿಕೆ, ಕಾಳು ಮೆಣಸು, ಭತ್ತ, ಅಕ್ಕಿ, ಗೇರು ಬೀಜ ವಗೈರೆ ಸಾಮಾನುಗಳನ್ನು ಪೇಟೆಗೆ ಸಾಗಿಸುವೆ. ಪೇಟೆಯ ಸಾಮಾನುಗಳನ್ನು ಹಳ್ಳಿಗೆ ತರುವೆ. ಆಗ ನಮಗೂ ಹಳ್ಳಿಗರಿಗೂ ಎಲ್ಲರಿಗೂ ದೊಡ್ಡದೊಂದು ಉಪಕಾರವಾಗುತ್ತದೆ. ನೋಡಿರಿ. ಎಷ್ಟೊಂದು ಉತ್ಪತ್ತಿ ಲಾಭ ನಮಗಾಗ ಬರಲಿದೆ. ಹಣ ಧಾರಾಳ ನಮ್ಮಲ್ಲಿ ಓಡಾಡುವ ಪರಿಸ್ಥಿತಿ ಬರದಿರುವುದೇ? ಹಣವಿದ್ದವನೇ ದೊಡ್ಡಪ್ಪನಾದುದರಿಂದ ಈ ಊರಲ್ಲಿ ನಾವೇ ಗಣ್ಯಮನುಷ್ಯರಾಗುವೆವು. ನಾಗರೀಕತೆಯ ಸುಧಾರಕರೆಂದೆನ್ನಿಸಿಕೊಳ್ಳುವೆವು. ಒಂದೇ ದಿನದಲ್ಲಿ ನಮ್ಮ ಮತ್ತು ಊರವರ ಅಡಿಕೆ ಮಂಗಳೂರಿಗೆ ಮಂಗಳೂರ ಸಾಮಾನು ಇಲ್ಲಿಗೆ ಎಂದೆನ್ನುತ್ತಾ ತನ್ನ ಸವಿಗನಸುಗಳನ್ನು ವಾಸುದೇವ ಭಟ್ಟರ ಕಿವಿಗಿಂಪಾಗುವಂತೆ ಕೃಷ್ಣಭಟ್ಟರು ವರ್ಣಿಸಿದರು.

"ಆದರೆ ಯಂತ್ರಗಳಲ್ಲಿ ಅಪಾಯ ಹೆಚ್ಚು. ಕೃಷಿಗಿಂತಲೂ ಕಷ್ಟದ ಕೆಲಸವದು."

"ಕಷ್ಟ ಕಷ್ಟವೆಂದೆನ್ನುವುದು ಕೆಲಸದ ಗುಟ್ಟರಿಯದೆ. ಕೆಲಸದ ಗುಟ್ಟರಿತವನಿಗೆ ಎಲ್ಲವೂ ಲೀಲಾಜಾಲ. ಅದಕ್ಕೇ ಹೇಳಿದೆನಲ್ಲ. ಮೊದಲಾಗಿ ಕಲಿತು ಬರುವೆನೆಂದು ಮತ್ತೆಲ್ಲಿ ಅಪಾಯ? ಕಲಿತ ಮೇಲೆ ಚಕ್ರಧಾರಿ ಶ್ರೀಕೃಷ್ಣನ ಹಾಗೆ ರೋಲೆತ್ತಿ ಒತ್ತಿ ವಾಹನದ ಚಕ್ರವನ್ನು ಅತ್ತಿತ್ತ ತಿರುಗಿಸಿದರೆ ಸಾಕು. ಸಂಪೂರ್ಣ ಕೆಲಸ ಕುಳಿತಲ್ಲಿಂದಲೇ ಸಾಗುವುದು. ಇಷ್ಟು ದಿನ ನೀವೇನನ್ನುವಿರೋ ಎಂದು ಸುಮ್ಮನಿದ್ದೆ. ನಿಮ್ಮ ಒಪ್ಪಿಗೆಯೊಂದಿದ್ದರೆ ಸಾಕು, ಸಾಧಿಸುವೆ. ಗುರುಹಿರಿಯರಾದ ನಿಮ್ಮ ಆಶೀರ್ವಾದ ಬಲವೊಂದಿದ್ದರೆ ಎಷ್ಟೇ ಕಷ್ಟದ ಕೆಲಸವಾದರೂ ಸುಲಭ ಸಾಧ್ಯವಾಗುವುದು. ಜಯಶೀಲನಾಗುವೆನು. ಆಗದೇ? ಎಂದು

ಪ್ರಶ್ನಾರ್ಥಕ ಚಿಹ್ನೆಯಿಂದ ವಾಸುದೇವ ಭಟ್ಟರ ಮುಖವನ್ನೇ ಕೃಷ್ಣ ಭಟ್ಟರು ನೋಡಿದರು.

"ನಿನ್ನಂತಹ ಬುದ್ಧಿ ಬಂದ ಹುಡುಗರಿಗೆ ನಾನೇನು ಹೇಳುವುದು? ಯಾವುದೇ ಆಗಲಿ. ಮನುಷ್ಯನಾದವನಿಗೊಂದು ಉದ್ಯೋಗ ಬೇಕು. ನಿರುದ್ಯೋಗಿಯಾಗಿರಬಾರದು. ಆದಕಾರಣ ಗಾಳಿಗೆ ಸರಿಯಾಗಿ ದೋಣಿಯು ಹಾಯಿ ಬಿಚ್ಚುವಂತೆ ನಿನ್ನೊಲವಿಗಡ್ಡಿ ಬರದಿರುವುದೇ ಲೇಸು ಎಂದು ವಾಸುದೇವ ಭಟ್ಟರು ಅರೆ ಮನಸ್ಸಿನಿಂದ ನುಡಿದರು. "ಹೇಗೂ ಒಪ್ಪಿದ ಹಾಗಾಯಿತಲ್ಲ. ಗೆದ್ದೆ; ಎಂದುಕೊಂಡರು ಕೃಷ್ಣ ಭಟ್ಟರು.

ಕೆಲವೇ ದಿನಗಳಲ್ಲಿ ಕೃಷ್ಣ ಭಟ್ಟರು ಡ್ರೈವಿಂಗ್ ಕಲಿಯುಲಾಗಿ ಮಂಗಳೂರಿಗೆ ತೆರಳಿದರು. ಪರೀಕ್ಷೆಯಲ್ಲಿ ಸೋತು ತಪ್ಪಿಹೋದ ಪೇಟೆಯ ಸುಖವಾಸ ಪುನಃ ಅವರಿಗೆ ದೊರಕಿತು. ಎಷ್ಟು ಬೇಕೋ ಅಷ್ಟು ಹಣ ಏನಾದರೊಂದು ನೆವನವೊಡ್ಡಿ ಕೃಷ್ಣಭಟ್ಟರು ಪಡೆಯುತ್ತಿದ್ದರು. ರಾಜಕುಮಾರರ ರೀತಿಯಲ್ಲಿ ಮಂಗಳೂರಲ್ಲಿ ಮತ್ತೂ ಆರು ತಿಂಗಳು ಮೆರೆದರು. ಡ್ರೈವಿಂಗಿನ ಕೆಲಸಗಳನ್ನೆಲ್ಲಾ ಮನವಿಟ್ಟು ಕಲಿತರು. ಡ್ರೈವಿಂಗ್ ಟ್ರಾಯಲ್ ಕೊಟ್ಟು ಡ್ರೈವರನಾಗುವ ಯೋಗ್ಯತೆಯನ್ನು ಹೇಗೂ ಪರೀಕ್ಷಕರಿಗೆ ಬೆಣ್ಣೆ ಹಾಕಿಯೂ ಗಳಿಸಿಕೊಂಡರು. ಡ್ರೈವಿಂಗ್ ಲೈಸನ್ಸು ಪಡಕೊಂಡು ಡ್ರೈವರರೆನಿಸಿಕೊಂಡರು. ಇಷ್ಟರಲ್ಲಿ ಕೃಷ್ಣ ಭಟ್ಟರು ದೊಡ್ಡ ಮನುಷ್ಯರಾಗಿದ್ದರು. ಕೃಷ್ಣ ಭಟ್ಟರು ಹಳ್ಳಿಗರ ಅಭ್ಯುದಯಕ್ಕಾಗಿ ಡ್ರೈವಿಂಗ್ ತರಬೇತಿಗೆ ಮಂಗಳೂರಿಗೆ ಸಾಗಿರುವರು. ಡ್ರೈವರನಾಗಿ ಹಳ್ಳಿಗಳ ಸಾಮಾನಿನ ಸಾಗಾಟಕ್ಕೆ ವಿಶೇಷ ಸಹಕಾರನೀಡುವರು ಎಂದು ವಾಸುದೇವ ಭಟ್ಟರು ಊರೆಲ್ಲಾ ಪ್ರಚಾರ ಮಾಡಿದ್ದರು. ಟೇಕ್ಸಿಯೋ ಲೋರಿಯೋ ಬಸ್ಸೋ ಬೆಲೆಗೆ ಪಡಕೊಳ್ಳುವ ಮೊದಲು ಸರ್ವೀಸು ಬಸ್ಸುಗಳ ಕೆಲಸ ದೊರಕಿಸಿಕೊಂಡು ಸಂಪೂರ್ಣ ತರಬೇತಿ ಪಡೆಯುವುದೊಳ್ಳಿತು ಎಂದು ಕೃಷ್ಣ ಭಟ್ಟರು ನಿಶ್ಚಯಿಸಿದರು. ಜಯಭಾರತ ಬಸ್ ಕಂಪೆನಿಯ ಮ್ಯಾನೇಜರೊಡನೆ ಮಾತನಾಡಿದರು.

ಅವರಿಗೆ ಡ್ರೈವರನೊಬ್ಬನ ಅಗತ್ಯವಿತ್ತು. "ಒಂದು ಅಥವಾ ಎರಡು ತಿಂಗಳನಂತರ ಖಾಲಿಯಾಗುವ ಕೆಲಸವೊಂದಿದೆ. ನಿಮ್ಮನ್ನೇ ಕೆಲಸಕ್ಕೆ ತಕ್ಕೊಳ್ಳುವೆವು" ಎಂದು ಅವರು ಅಭಯವಿತ್ತರು.

"ಡ್ರೈವರನಾಗಿ ಊರೂರು ಅಲೆಯುವ ಕೃಷ್ಣ ಭಟ್ಟರು ನಮ್ಮ ಕೈ ತಪ್ಪಿ ಹೋಗಲೂ ಸಾಕು. ಆದ್ದರಿಂದ ಅವರಿಗೊಂದು ಯೋಗ್ಯ ಸಂಬಂಧ ಹುಡುಕಿ ಕುತ್ತಿಗೆಗೆ ಕಟ್ಟಿ ಸಂಸಾರಕ್ಕೊಯ್ಯಬೇಕು." ಎಂದು ಗಂಗಮ್ಮನೂ ವಾಸುದೇವ ಭಟ್ಟರೂ ಯೋಚಿಸಿದರು. ಕೃಷ್ಣ ಭಟ್ಟರಿಗೆ ತಕ್ಕ ವಧುವನ್ನು ಅಲ್ಲಿ ಇಲ್ಲಿ ಅರಸತೊಡಗಿದರು. ಕೃಷ್ಣ ಭಟ್ಟರಿಗೆ ನಾ ಮುಂದೆ ತಾ ಮುಂದೆ ಎಂದು ಹೆಣ್ಣು ಕೊಡಲು ಹಲವಾರುಜನ ಮುಂದೆ ಬಂದರು. "ಕನ್ನಿಕೆಯು ಒಳ್ಳೆಯ ರೂಪವತಿಯಾಗಿರಬೇಕು. ಓದುಬರಹ ತಿಳಿದವಳಾಗಿರಬೇಕು. ತನಗೆ ತಕ್ಕವಳಾಗಿರಬೇಕು." ಎಂದು ಕೃಷ್ಣ ಭಟ್ಟರ ಮನೋಗತ. "ಕನ್ನಿಕೆ ಸಿರಿವಂತರ ಕುಟುಂಬ ದಲ್ಲಿ ಹುಟ್ಟಿದವಳಾಗಿ ಕುಲೀನಳೂ ತಕ್ಕಮಟ್ಟಿಗೆ ರೂಪವುಳ್ಳವಳೂ ಸುಶೀಲೆಯೂ ಆಗಿರಬೇಕು. ವರದಕ್ಷಿಣೆ ಹುಡುಗನ ಯೋಗ್ಯತೆಗೆ ಸರಿ ಯಾಗಿ ಸಿಗಬೇಕು" ಎಂದು ಹೆತ್ತವರ ಮನೋಭಿಪ್ರಾಯ. ಕಟ್ಟಕಡೆಗೆ ರೋಗಿ ಬಯಸಿದ್ದೂ ಹಾಲು ವೈದ್ಯಕೊಟ್ಟದ್ದೂ ಹಾಲೆಂಬಂತೆ ಕಾಡ ಹಳ್ಳಿ ಶಂಭುಭಟ್ಟರು ಕೃಷ್ಣ ಭಟ್ಟರಿಗೆ ತಮ್ಮ ಮಗಳನ್ನೀಯಬಹು ದೆಂದೂ ಒಂದು ಸಾವಿರ ರೂಪಾಯಿ ವರದಕ್ಷಿಣೆ ಕೊಡಬಹುದೆಂದೂ ತಿಳಿಸಿದರು. ಅಲ್ಲದೆ ಸಾಕಷ್ಟು ಚಿನ್ನಾಭರಣ ಮಗಳ ಮೈಮೇಲಿರುಸು ವುದಾಗಿಯೂ ಅರುಹಿದರು. ವಾಸುದೇವ ಭಟ್ಟರೂ ಶಂಭು ಭಟ್ಟರೂ ಜೋಯಿಸರಲ್ಲಿಗೆ ತೆರಳಿದರು. "ಸಮಸಪ್ತಮ ಮೇಳಾಮೇಳಿ ಚೆನ್ನಾಗಿ ಕೂಡಿಬರುತ್ತದೆ. ಆಗಬಹುದು" ಎಂದು ಜೋಯಿಸರು ತೀರ್ಪು ಹೇಳಿದರು. ಮುಹೂರ್ತ ನಿಶ್ಚಯವಾಯಿತು. ಕೃಷ್ಣ ಭಟ್ಟರಿಗೆ ಲಲಿತೆ ಯೊಂದಿಗೆ ವಿವಾಹ ವಿಜೃಂಭಣೆಯಿಂದ ನೆರವೇರಿತು. ವಾಸುದೇವ ಭಟ್ಟರ ಮನೆಯಲ್ಲಿ ಮಗುದೊಮ್ಮೆ ಸಂತೋಷ ಸಂಭ್ರಮಗಳು ತಲೆ ದೋರಿದುವು.

## ಸುಳಿ ೩

ಕೆಲಸ ಸಿಕ್ಕಿದೊಡನೆಯೇ ಕೃಷ್ಣ ಭಟ್ಟರು ಹೊರಡಲನುವಾದರು. ನಿಶ್ಚಿತ ದಿನದಂದು ಕೃಷ್ಣ ಭಟ್ಟರು ಉದ್ಯೋಗಕ್ಕೆ ಹಾಜರಾದರು ಕೃಷ್ಣ ಭಟ್ಟರು ಡ್ರೈವರ್ ಆದರು. ಕಾಸರಗೋಡು ಪುತ್ತೂರು ಲೈನಿನಲ್ಲಿ ದಿನಕ್ಕೆರಡು ಬಾರಿ ಅವರ ಬಸ್ಸಿನ ಓಡಾಟ. ಡ್ರೈವರರಾದ ಕೃಷ್ಣ ಭಟ್ಟರ ಸಡಗರ ಹೇಳಿತೀರದು. ಈಗವರು ದೊಡ್ಡ ಸರಕಾರಿ ಹುದ್ದೆ ಸಂಪಾದಿಸಿಕೊಂಡವರಿಗಿಂತಲೂ ಮಿಗಿಲಾಗಿದ್ದರು. ಅವರ ದೃಷ್ಟಿನೆಲವನ್ನು ಕಾಣುತ್ತಿರಲಿಲ್ಲ. ತಾನೊಬ್ಬ ದೊಡ್ಡ ಮನುಷ್ಯನೆಂಬ ಅಹಂಭಾವ ಮನದಲ್ಲಿ ತುಂಬಿತ್ತು. ಅದಕ್ಕೆ ಸರಿಯಾಗಿ ಅವರ ನಡೆನುಡಿಗಳೂ ಹೊಂದಿಕೊಂಡಿದ್ದುವು. ಬಸ್ಸು ತಂಗುವೆಡೆಗಳಲ್ಲಿ ಚಾ ಸೇವನೆಗಾಗಿ ಕಾಫಿ ಸೇವನೆಗಾಗಿ ಠೀವಿಯಿಂದ ನಡೆಯುವ ಅವರ ನಡಿಗೆ ನೋಡಬೇಕು. ಸ್ವರ್ಗಲೋಕದಿಂದಿಳಿದು ಬಂದ ದೇವೇಂದ್ರ ನಡೆಯುವಂತೆ ನಡೆಯುತ್ತಿದ್ದರು. ಹಾಗೆ ನಡೆಯುತ್ತಿರುವಾಗ ಅವರ ಪರಿಚಯ ಮಾಡಿಕೊಳ್ಳಲಾಗಿ ಬಸ್ಸಿನಲ್ಲಿ ಸ್ಥಳ ದೊರಕಿಸಿಕೊಳ್ಳಲಾಗಿ ಸ್ವಾಮಿ! ಸಾರ್! ಎಂದು ನಮಸ್ಕರಿಸುವವರೆಷ್ಟು ಮಂದಿ. ಸ್ಥಳ ಕೇಳಿದಾಗ "ಇದ್ದರೆ ಉಂಟು ಇಲ್ಲವಾದರೆ ಊಹೂಂ, ಅದೆಲ್ಲಾ ನಮ್ಮೊಡನೆ ಕೇಳಬಾರದು. ಏಜಂಟರೊಡನೆ ಕೇಳಿ ತಿಳಕೊಳ್ಳಿರಿ. ಕಂಡೆಕ್ಟರರಿದ್ದಾರೆ" ಎಂದೆನ್ನುವ ಅವರ ಸಿಡುಕು ಮೋರೆ, ತಿರಸ್ಕಾರಪೂರಿತದೃಷ್ಟಿ, ನಿರ್ಲಕ್ಷ್ಯಭಾವ ಇವುಗಳನ್ನು ನೋಡಿದಾಗ ಪಯಣಿಗರೆದೆ ಕೊರೆಯುತ್ತಿತ್ತು. ಚಾ ಕುಡಿದು ಬಂದು ಇಂಜಿನಿನ ಬಳಿ ಕುಳಿತು ಕಾಲ ಮೇಲೆ ಕಾಲು ಹಾಕಿ ರಿಸ್ಟ್‌ವಾಚು ನೋಡಿ ಸಿಗರೇಟು ತೆಗೆದು ಬಾಯಲ್ಲಿ ಕಚ್ಚಿ ಬೆಂಕಿಕಡ್ಡಿ ಗೀರಿ ಸುರುಳಿ ಸುರುಳಿಯಾಗಿ ಹೊಗೆಯನ್ನು ಬಿಡುವ ಅವರ ವೈಖರಿ ನೋಡಬೇಕು. ಆಗ ಡ್ರೈವರರೊಡನೆ ಫ್ರಂಟ್ ಸೀಟಿನಲ್ಲಿ ಕುಳಿತುಕೊಳ್ಳಲಾಗಿ ಬೀಡಾ ಕೊಟ್ಟು ಸ್ಪೆಶ್ಯಲ್ ಸಿಗರೇಟು ನೀಡಿ ಪರಿಚಯ ಮಾಡಿಕೊಳ್ಳುವವರೂ ಬಹುಮಂದಿ. ಕೃಷ್ಣ ಭಟ್ಟರು ಸಾಮಾನ್ಯದ ಜನರಂತೆಸಗಿದರೆ ಕಣ್ಣೆತ್ತಿಯೂ ನೋಡಲಾರರು. ತನ್ನಂತೆಯೇ ಇರುವ ಐಸಿರಿಯ ಧರ್ಪಾಹಂಕಾರ ತೋರುವ ಪಟಾಕಿಯ ಜನರಾದರೆ ನಗುಮುಖರಾಗಿ ಸ್ವಾಗ

ತಿಸಿ ಬಳಿಯಲ್ಲಿ ಕುಳ್ಳಿರಿಸಿಕೊಳ್ಳುವರು. ಹರಟೆ ಹೊಡೆಯುವರು. ತಮಾಷೆಯ ಸರಸ ಮಾತುಗಳನ್ನಾಡುವರು. ಬಸ್ ಕಂಡೆಕ್ಟರ್ ಕುಂಞಿರಾಮ ಕೃಷ್ಣ ಭಟ್ಟರಿಗೆ ಸರಿಯಾದ ಜೊತೆಗಾರನಾಗಿದ್ದನು. ಪ್ರಯಾಣಿಕರನ್ನವನು ಬನ್ನ ಬಡಿಸುವುದರಲ್ಲಿ ಕೃಷ್ಣ ಭಟ್ಟರಿಗಿಂತಲೂ ಮಿಗಿಲಾಗಿದ್ದನು. ತಮಗೆ ಧಾರಾಳ ದಮ್ಮಯ್ಯ ಹಾಕಿದವರಿಗೆ ಸೀಟು ಕೊಡುತ್ತಿದ್ದನು. ಮಾರ್ಗದ ಬದಿಯಲ್ಲಿ ಸಾಮಾನ್ಯ ಬಡಜನರಾದರೂ ಕೈಯೆತ್ತಿದರೆ ಸೀಟಿಲ್ಲ. ಸೀಟಿಲ್ಲವೆಂದು ಕೈಯಾಡಿಸಿ ಕೇಕೆ ಹಾಕಿ ನಗುವನು. ಯಾರಾದರೂ ಮರ್ಯಾದಸ್ಥರಾದ ಶ್ರೀಮಂತರು ನಡು ದಾರಿಯಲ್ಲಿ ಕೈಯೆತ್ತಿದರೆ ಸೀಟಿಲ್ಲವಾದರೂ ಬಸ್ಸು ನಿಲ್ಲಿಸುವನು. ಒಬ್ಬರ ಮೇಲೊಬ್ಬರು ಕುಳಿತುಕೊಳ್ಳುವಂತೆಸಗಿ ಜಾಗಮಾಡಿ ಕೊಡುತ್ತಿದ್ದನು. ಅಂತೂ ಬಸ್ಸು ಡ್ರೈವರರಿಗೂ ಕಂಡೆಕ್ಟರರಿಗೂ ಶ್ರೀಮಂತರೂ ಆಡಂಬರ ದವರೂ ಮನುಷ್ಯರಾಗಿ ಕಾಣುತ್ತಿದ್ದರಲ್ಲದೆ ಇತರರು ಹುಲ್ಲುಕಡ್ಡಿಗೆ ಸರಿಯಾಗಿ ತೋರುತ್ತಿದ್ದರು. ಅವರ ಈ ವರ್ತನೆ ಪ್ರಯಾಣಿಕರ ಮನ ನೋಯಿಸಿದರೂ ನಿರ್ವಾಹವಿಲ್ಲದೆ ಬಸ್ಸಿಗಾಗಿ ಕಾಯುವ ಜನ ಧಾರಾಳ ಇರುತ್ತಿದ್ದರು. ಸ್ಥಳ ಸಿಕ್ಕದಾದಾಗ ಕೃಷ್ಣ ಭಟ್ಟರನ್ನೂ ಕುಂಞಿರಾಮ ನನ್ನೂ ಬಸ್ಸನ್ನೂ ಬಸ್ಸು ಕಂಪೆನಿಯನ್ನೂ ಶಪಿಸುತ್ತಿದ್ದರು. ಜೊತೆ ಗಾರರಿವರಿಬ್ಬರು ಒಬ್ಬರಿಗಿಂತೊಬ್ಬರು ಮಿಗಿಲಾಗಿದ್ದರು. ಬಸ್ಸಿನ ಪ್ರಯಾಣಿಕರನ್ನು ಬನ್ನಬಡಿಸುವುದೆಂದರೆ ಇವರಿಗೊಂದು ತಮಾಷೆಯ ಆಟ. ಬಸ್ಸಿನೊಳ ಕುಳಿತು ಅವ್ಯವಸ್ಥೆಯ ವಿಷಯವಾಗಿ ಯಾರಾದರೂ ಮಾತೆತ್ತಿದರೆ ಮನಬಂದಂತೆ ಅವರಿಳಿಯುವ ವರೆಗೆ ಸಹಸ್ರನಾಮಾ ರ್ಚನೆ ಮಾಡಿ ಗೇಲಿ ಮಾಡುತ್ತಿದ್ದರು. ಯಾರಾದರೂ ಕೈಯೆತ್ತಿದರೆ ಹತ್ತಾರು ಮಾರು ದೂರದಲ್ಲಲ್ಲದೆ ಬಸ್ಸು ನಿಲ್ಲಿಸಲಾರರು. ತುಸುದೂರ ಬಸ್ಸು ನಿಲ್ಲಿಸಿದಾಗ ಆ ಪ್ರಯಾಣಿಕರು ಲಗುಬಗೆಯಿಂದೋಡಿ ಬರುವ ಭರನೋಡಿ ನಗುತ್ತಿದ್ದರು. ಕೆಲವೊಮ್ಮೆ ಬಡಜನರೋಡಿ ಹತ್ತಿರ ತಲಪಿದರೆಂದಾಗ ಬಸ್ಸೋಡಿಸಿ ಆನೆ ಮುರಿದು ಅವರ ಮೊಗನೋಡಿ ಪರಿಹಾಸಗೈಯುತ್ತಿದ್ದರು. ಪ್ರಯಾಣಿಕರು ಬಸ್ಸಿನಿಂದಿಳಿಯಬಯಸಿದಲ್ಲಿ ಇಳಿಸುತ್ತಿರಲಿಲ್ಲ. ಕಡಿಮೆ ಪಕ್ಷ ಅರ್ಧ ಫರ್ಲಾಂಗಾದರೂ ಮೊದಲೇ

ಇಳಿಸಿಬಿಡುತ್ತಿದ್ದರು. ಪ್ರಯಾಣಿಕರು ಚಿಲ್ಲರೆಯಿಲ್ಲದೆ ಇಡಿಯ ನೋಟು ಕೊಟ್ಟರೆ ಬಾಕಿ ದುಡ್ಡನ್ನವರಿಗೆ ಕಂಡಕ್ಟರರು ಕೊಡುವುದಪರೂಪ. ಹಾಗೆ ಎಲ್ಲರಿಗೂ ಕೊಡದೆ ಇರುವವನಲ್ಲ. ಜನನೋಡಿ ದುಡ್ಡು ವಸೂಲು ಮಾಡುವ ಕೆಲಸ ಕಂಡಕ್ಟರನದಾಗಿತ್ತು.

ಸಂಗಾತಿ ಕುಂಞಿರಾಮು ಬಹು ಚಾಲಾಕಿನ ಮನುಷ್ಯ. ರಸಿಕ; ಮಾತಿನಮಲ್ಲ. ಮನುಷ್ಯನಾದವನು ಯಾವ ರೀತಿಯಲ್ಲೇ ಆಗಲಿ ಸುಖಪಡದಬೇಕೆಂದವನಸಿದ್ಧಾಂತ. ಬಸ್ಸಿನ ಕೆಲಸವೆಂದರೆ ಬಹುಕಷ್ಟ. ಅತ್ತಿತ್ತ ಓಡಾಡಿದುದರ ಫಲವಾಗಿ ಮೈ ಕೈ ನೋಯುತ್ತದೆ. ಮೈ ಕೈ ನೋವು ಉತ್ತಮವಾದ ಆಸವ ಸೇವಿಸಿದರೆ ಇಲ್ಲದಾಗುವುದು. ಎಂದು ಕುಂಞಿರಾಮುನ ಅನುಭವ. ಹೌದೋ ಅಲ್ಲವೋ ಎಂಬುದನ್ನು ಪರೀಕ್ಷಿಸಿ ನೋಡುವಂತೆ ಕೃಷ್ಣ ಭಟ್ಟರನ್ನು ಪ್ರೇರೇಪಿಸಿದನು. ಪರೀಕ್ಷೆಗೆಂದು ಆಸವ ಸೇವಿಸಿದ ಕೃಷ್ಣ ಭಟ್ಟರಿಗದರ ರುಚಿ ಕುಂಞಿರಾಮುನಂತೆಯೇ ಹಿಡಿಯಿತು. ಕ್ರಮೇಣ ಸಂಗಾತಿಗಳಾದ ಕೃಷ್ಣ ಭಟ್ಟರನ್ನೂ ತನ್ನಂತೆಯೇ ಮದಿರಾದೇವಿಯ ಆರಾಧಕರಾಗುವಂತೆ ಕುಂಞಿರಾಮುನೆಸಗಿದ. ತನ್ನ ಬಲೆಯಲ್ಲಿ ಕೆಡವಿಕೊಂಡ. ತಿಂಗಳಿಗೊಂದೆರಡು ಬಾರಿ ಮನೆಕಡೆಗೆ ಸವಾರಿ ಬಿಡುವ ಕೃಷ್ಣ ಭಟ್ಟರನ್ನು ಆಗಾಗ ಗೇಲಿಮಾಡುತ್ತಿದ್ದನು. ಚೇಷ್ಟೆ ಮಾಡಿ ಪರಿಹಾಸ ಮಾಡುತ್ತಿದ್ದನು. "ರಾತ್ರಿ ಒಂಟಿಜೀವನವೆಂದರೆ ಬಹು ಬೇಸರದ ವಿಷಯ. ಗಂಡಿಗೊಂದು ಹೆಣ್ಣು ಬೇಕು. ಹೆಣ್ಣಿಗೊಂದು ಗಂಡು ಬೇಕು. ಇದು ಲೋಕನಿಯಮ. ಪ್ರಾಣಿವರ್ಗಕ್ಕೆಲ್ಲ ಸಮನಾದುದು. ಅದಕ್ಕೊಂದು ವಿಶೇಷ ರೀತಿಯ ನೀತಿ ನಿಯಮವಿಟ್ಟುಕೊಳ್ಳುವುದು ಹೆಡ್ಡರ ಪಂಚಾಯಿತಿಗೆ. ತನಗೆ ತಾನೇ ವಿರೋಧಿಯಾದ ಹಾಗೆ. ಗೊಡ್ಡು ವೇದಾಂತಿಗಳೋ ಶಾಸ್ತ್ರಕಾರರೋ ಮನಬಂದಂತೆ ಏನು ಬೇಕಾದರೂ ಹೇಳಲಿ. ಸಿಗಬೇಕಾದ್ದು ಸಿಗದಲ್ಲಿ ಮನುಷ್ಯನ ಬುದ್ಧಿ ಚಂಚಲವಾಗುತ್ತದೆ. ಸ್ಥಿರತೆ ತಪ್ಪುತ್ತದೆ. ಕಡೆಗದರಿಂದ ಮಿದುಳೇ ಕೆಟ್ಟುಹೋಗುವ ಸಂಭವ ಬಹಳ. ನೀವು ಚಂಚಲಚಿತ್ತರಾಗಿ ಆಗಾಗ ಮನೆಕಡೆಗೆ ರಜೆ ತೆಗೆದು ಹೋಗುತ್ತಿರುವಿರಲ್ಲ. ಅಯ್ಯೋ ಕಷ್ಟವೇ? ಪ್ರತಿನಿತ್ಯ ಚಿಂತೆಯಲ್ಲೇ ಮುಳುಗಿರ

ಬೇಕೇ? ಮನಸ್ಸಿದ್ದಲ್ಲಿ ಎಲ್ಲವೂ ಇವೆಯೆಂದಿರುವಾಗ ಜೀವನದ ಬೇಸರ ಕಳೆಯಲು ಬೇರೆ ಮಾರ್ಗ ಹಿಡಿಯಬಾರದೇ? ಈ ರೀತಿ ಕಷ್ಟಪಡ ಬೇಕೇ?" ಎಂದು ಆಗಾಗ ಒತ್ತಿ ನುಡಿಯುತ್ತಿದ್ದ. ಮೊದಲು ಮೊದಲು ಕೃಷ್ಣ ಭಟ್ಟರು ಕುಂಞಿರಾಮನ ಮಾತುಗಳಿಗೆ ಕಿವಿಗೊಡದಿದ್ದರೂ ಕ್ರಮಶಃ ಅವನ ಮಾತುಗಳು ಅವರ ಹೃದಯದಲ್ಲಿ ನಾಟತೊಡಗಿದುವು. "ಕುಂಞಿರಾಮನೆಂದಂತೆ ಯಾಕಾಗದು? ಸುಖವಡೆಯುವ ಸರ್ವಾಧಿ ಕಾರ ಪುರುಷನಿಗಿದೆಯೆಂದಿರುವಾಗ ನನ್ನಂತಹನು ಕಟ್ಟುನಿಟ್ಟುಗಳಿಗೊಳ ಗಾಗಬೇಕೇ?" ಎಂದು ಮನದಲ್ಲಿ ಉಯ್ಯಾಲೆ ತೂಗತೊಡಗಿದರು. ಮೆಲ್ಲಮೆಲ್ಲನೆ ಕುಂಞಿರಾಮ ಕೃಷ್ಣ ಭಟ್ಟರ ಮನ ಅಡ್ಡಹಾದಿಗಿಳಿಯು ವಂತೆಸಗಿದನು.

ಬಸ್ಸು ಸಂಜೆಗೆ ಕಾಸರಗೋಡಲ್ಲಿ ತಂಗುತ್ತಿತ್ತು. ಕಾಸರಗೋಡಿ ನಿಂದ ತುಸುದೂರದಲ್ಲಿ ರಸ್ತೆಯ ಸನಿಯದಲ್ಲೊಂದು ಫರ್ಲಾಂಗು ದೂರದಲ್ಲಿ ಒಂದು ಚಿಕ್ಕ ಮನೆಯಿತ್ತು. ಅಲ್ಲಿ ಸುಂದರಿಯಾದ ನವ ಯುವತಿಯೊಬ್ಬಳಿರುವಳು ಎಂದು ಕುಂಞಿರಾಮ ಕೃಷ್ಣ ಭಟ್ಟರಿಗರು ಹಿದನು. ಮಕರಂದ ಪಾನಕ್ಕೆ ಹಾತೊರೆವ ಭೃಂಗದಂತೆ ರೂಪವತಿಯ ವರ್ಣನೆ ಕೇಳಿ ಕೃಷ್ಣ ಭಟ್ಟರು ಆಕೆಯನ್ನು ಕಣ್ಣಾರೆ ನೋಡಲು ತವಕ ಗೊಂಡರು. ಕುಂಞಿರಾಮ ಕೃಷ್ಣ ಭಟ್ಟರಿಗಾಕೆಯ ಭೇಟಿ ಮಾಡಿಸಿ ದನು. ಕೃಷ್ಣ ಭಟ್ಟರ ಕಣ್ಮನಗಳು ರೂಪವತಿಯಾದಾಕೆಯಲ್ಲಿನಟ್ಟುವು, ಹಿಂತಿರುಗಲೊಪ್ಪಲಿಲ್ಲ. "ಆಕೆ ಸವರ್ಣೀಯಳಲ್ಲವಾದರೂ ತೊಂದರೆ ಯೇನು? ಕೆಸರಲ್ಲಿ ಹುಟ್ಟಿದ ಕಮಲ ದೇವರಪೂಜೆ ಗ್ರಾಹ್ಯವೆಂದಿರು ವಾಗ ಚೆಲುವು ಎಲ್ಲಿದ್ದರೇನು? ಅದುಗ್ರಾಹ್ಯ"ಎನತೊಡಗಿತು. ಕೃಷ್ಣ ಭಟ್ಟರ ಹೃದಯ "ಪಕ್ಕದ ಮನೆಯಾಕೆ ತನ್ನ ಗೆಳತಿ. ನೀವೀಕೆಯ ಗೆಳತನ ಬೆಳಿಸಿಕೊಳ್ಳುವಿರಾದರೆ ನಮಗಿಬ್ಬರಿಗೂ ಅನುಕೂಲ. ಬಿಡು ವಿನ ಸಮಯ ಒಂದಾಗಿ ಬಂದು ಜೀವನದಲ್ಲಿ ಸ್ವಾಭಾವಿಕವಾಗಿ ತಲೆ ದೋರುವ ಇಂದ್ರಿಯದಾಹ ಪೂರೈಸಿ ತಣಿಸಿ; ಬಂದಂತೆ ಒಂದಾಗಿ ನಮ್ಮ ವೃತ್ತಿಯೆಡೆಗೆ ಹಿಂತಿರುಗಬಹುದು" ಎಂದು ಗೆಳೆಯ ಕುಂಞಿ ರಾಮ ಸಲಹೆಯಿತ್ತ. ಆಕೆಯ ಗೆಳೆತನ ಸಂಪಾದಿಸಲು ತಕ್ಕ ಸಲಹೆ

ಗಳನ್ನು ಸೂಚಿಸಿದನು. ಪರೋಕ್ಷವಾಗಿ ಆಕೆ ನಿಮ್ಮೊಡನೆ ಸಹಕರಿಸುವಂತೆ ಸಹಾಯುವನ್ನೂ ಮಾಡುವೆನೆಂದು ಭರವಸೆ ಕೊಟ್ಟನು.

ಕೃಷ್ಣ ಭಟ್ಟರು ಈಗೀಗ ಮನೆಕಡೆಗೆ ಬರುವುದೇ ಇಲ್ಲ. ಮನೆಗೆಲ್ಲಾದರೂ ಅಪರೂಪವಾಗಿ ಬಂದರೂ ಒಂದು ಬಗೆಯ ವೈರಸ್ಯ. ಲಲಿತೆಗೂ ವಾಸುದೇವ ಭಟ್ಟರೇ ಮೊದಲಾದ ಬಂಧುಗಳಿಗೂ "ಇದೇನು ಮಾರ್ಪಾಡು" ಎಂದೆನುವ ಸಂಶಯ ಚಿಂತೆಗಳು ತಲೆಕೆರೆಯತೊಡಗಿದುವು. ಶ್ರಮದಿಂದ ಬಸವಳಿದಿರಲು ಇಂತಾಗಬಹುದೆಂದು ಸಮಾಧಾನ ತಕ್ಕೊಂಡರೂ ಮನಸ್ಸು ಸ್ತಿಮಿತಕ್ಕೆ ಬರುತ್ತಿರಲಿಲ್ಲ. ಅವರಾದರೂ ಬಹುದೂರವಿರುವಾಗ ಮೂಲವನ್ನರಿಯುವುದೆಂತು? "ಒಳಗಿನ ಗುಟ್ಟು ಶಿವನೇ ಬಲ್ಲ" ಎಂಬಂತಾಯಿತು. ಪ್ರಾರಂಭದಲ್ಲಿ ಸಂಬಳ ಸಿಕ್ಕಿದ ಹಣ ಕೃಷ್ಣ ಭಟ್ಟರಿಗೆ ತಮ್ಮಮಟ್ಟಿಗೆ ಖರ್ಚಿಗೆ ಸಾಕಾಗುತ್ತಿತ್ತು. ಈಗ ಮದಿರಾದೇವಿ ಕಮಲಾದೇವಿಯರ ಸಂಸರ್ಗ ಗಾಢವಾದ ನಂತರ ಹಣ ಇದ್ದಷ್ಟು ಸಾಕಾಗುತ್ತಿರಲಿಲ್ಲ. ಕುಂಞರಾಮನೊಂದಿಗೆ ಸಹಕರಿಸಿ ಬಸ್ಸಿನಲ್ಲಿ ಓವರ್‌ಲೋಡ್ ಮೊದಲಾದುವನ್ನು ಮಾಡಿಯೂ ಕಂಪೆನಿಗೆ ಮೋಸ ಮಾಡಿಯೂ ಹಣ ಸಂಪಾದಿಸಿದರೂ ಸಾಕಾಗದೆ ಬಂತು. ಹಣಬೇಕಾಗಿ ಬಂದಾಗ ಮನೆಗೊಮ್ಮೊಮ್ಮೆ ಹೋಗುತ್ತಿದ್ದರು. ನಾಲ್ಕೈದು ಬಾರಿ ಹಣ ಕೇಳಿದಾಗ ವಾಸುದೇವ ಭಟ್ಟರು ಮಾತೆತ್ತದೆ ಕೊಟ್ಟರು. ಪುನಃ ಪುನಃ ಹಣ ಕೇಳುವಾಗ ಧಾರಾಳ ಕೈತುಂಬಾ ಹಣ ಸಂಬಳ ಸಿಕ್ಕಿದರೂ ಸಾಕಾಗುವುದಿಲ್ಲವೇ? ಆರಂಭದಲ್ಲಿ ಸ್ವಲ್ಪ ಸ್ವಲ್ಪ ಹಣ ಮನೆಗೆ ಕೊಡುತ್ತಿದ್ದವನಿಗೆ ಈಗ ಮನೆಯಿಂದ ಹಣ ಎಷ್ಟು ಕೊಟ್ಟರೂ ಸಾಕಾಗಿ ಬರುವುದಿಲ್ಲ ಎಂದು ವಾಸುದೇವ ಭಟ್ಟರು ಗೊಣಗುವಾಗ ಕೃಷ್ಣ ಭಟ್ಟರು ರೇಗಿದರು.

ದುಡ್ಡು ಮನೆಯಲ್ಲಿ ಬೇಕಾದಷ್ಟಿರುವಾಗ ಕಷ್ಟಪಡಬೇಕೇ? ಸುಖಕ್ಕುಪಯೋಗಿಸದೆ ಕಟ್ಟಿಟ್ಟ ಹಣವನ್ನು ಸಾಯುವಾಗ ಕೊಂಡು ಹೋಗಲಿಕ್ಕೆ ಸಿಗುವುದುಂಟೇ? ಈ ಮನೆಯಲ್ಲಿ ನಿಮ್ಮ ನಂತರದವ ನಾನಾಗಿರಲು ನನಗೆ ಖರ್ಚಿಗೆ ಹಣ ಸಿಗಲಾರದೇ? ನನಗೂ ಈ ಮನೆಯ ಆದಾಯದಲ್ಲಿ ಹಕ್ಕಿಲ್ಲವೇ? ಎಂದು ಕೃಷ್ಣಭಟ್ಟರು ಗದರಿಸುತ್ತಿದ್ದರು.

ಸಾಮ ದಾನ ದಂಡ ಭೇದಗಳೆಂಬ ನಾಲ್ಕು ಉಪಾಯಗಳನ್ನು ಹೂಡಿ ಹಣ ಪಡೆಯುತ್ತಿದ್ದರು. ದುಡ್ಡೇ ಜೀವವಾಗಿರುವ ವಾಸುದೇವ ಭಟ್ಟರು ನಿರ್ವಾಹವಿಲ್ಲದೆ ಕೃಷ್ಣ ಭಟ್ಟರಿಗೆ ಹಣಕೊಟ್ಟು ವ್ಯಥೆಗೀಡಾಗಿ ಕೊರಗುತ್ತಿದ್ದರು. ಹೀಗೆಯೇ ಆದರೆ ದೊಡ್ಡ ಮಗ ಕುಲಕಂಟಕ ನಾಗಿ ಏನೂ ಬಾಕಿಯಿಡಲಾರೆ ಎಂದು ಚಿಂತಿಸುತ್ತಾ ಉತ್ಸಾಹವಿಲ್ಲದೆ ಕೃಶರಾಗುತ್ತಿದ್ದರು. ಪ್ರಪಂಚವೇ ಬೇಡವೆನ್ನುವ ವೈರಾಗ್ಯ ವಾಸು ದೇವ ಭಟ್ಟರಿಗೂ ಗಂಗಮ್ಮನಿಗೂ ಬರತೊಡಗಿತು.

ಕಮಲೆಗೂ ಕೃಷ್ಣ ಭಟ್ಟರಿಗೂ ಗೆಳೆತನ ಚೆನ್ನಾಗಿ ಬೆಳೆಯಿತು. ಬಸ್ಸು ನಿಲ್ದಾಣದಲ್ಲಿ ನಿಂತರೆ ಸಾಕು. ಹೊಟ್ಟೆಗೊಂದಿಷ್ಟು ಹಾಕಿ ಸೀದಾ ಕಮಲೆಯಲ್ಲಿಗೆ ಚಿತ್ತೈಸುತ್ತಿದ್ದರು. ತಮ್ಮ ದುಡಿತದ ಧನವನ್ನೆಲ್ಲಾ ಕಮಲೆಯ ಕೈಗೊಪ್ಪಿಸುತ್ತಿದ್ದರು. ಶಾಕಾಹಾರಿಗಳಾದ ಕೃಷ್ಣ ಭಟ್ಟರು "ಮಾಂಸಂ ಮಾಂಸೇನ ವರ್ಧತೇ" ಎಂಬ ಮಾತಿಗೆ ಕಿವಿಜೋಲುವವ ರಾದರು. ಗುಟ್ಟಿನಲ್ಲಿ ಮಾಂಸಾಹಾರವನ್ನುಪಯೋಗಿಸತೊಡಗಿದರು. ಅದಕ್ಕೆಲ್ಲಾ ಕಮಲೆಯ ಮನೆಯಲ್ಲೇ ತಕ್ಕ ಏರ್ಪಾಡುಗಳು. ಈ ರೀತಿ ದಿನಗಳ ಮೇಲೆ ದಿನಗಳು ಸಾಗುತ್ತಿರಲು ಕಮಲೆಗೆ ಗರ್ಭಲಕ್ಷಣ ಗಳು ಚೆನ್ನಾಗಿ ತೋರತೊಡಗಿದುವು "ತಮ್ಮಿಬ್ಬರ ಪ್ರೇಮದ ಮೂರ್ತಿ ಉದರ ಮಧ್ಯದಲ್ಲಿ ಬಳೆಯುತ್ತಿದೆ" ಎಂದು ಕಮಲೆ ಒಯ್ಯಾರದಿಂದ ತಿಳಿಸಿದಾಗ ಕೃಷ್ಣ ಭಟ್ಟರಿಗೆ ಆಕಾಶವೇ ತಲೆ ಮೇಲೆ ಕಳಚಿ ಬಿದ್ದಂತಾ ಯಿತು. "ಇನ್ನೇನು ಗತಿ. ಗುಟ್ಟು ರಟ್ಟಾಯಿತಲ್ಲ. ಜನರೆದುರೂ ಬಂಧುಬಳಗದೆದುರೂ ಮೊಗವನ್ನೆಂತು ತೋರಲಿ? ಬಂಧುಬಳಗಕ್ಕೆ ಈ ವೃತ್ತಾಂತವರಿತರೆ ನಾಚಿಕೆಗೇಡಲ್ಲವೇ?" ಎಂದು ಕೃಷ್ಣಭಟ್ಟರು ವಿಮ ನಸ್ಕರಾದರು. "ಸಾಧ್ಯವಿದ್ದಷ್ಟು ಕಮಲೆಯಿಂದ ದೂರವಾಗಿರುವುದು ಲೇಸು. ಆದರೆ ಕಮಲೆಗೆ ಹಲವಾರು ಬಗೆಯ ಭಾಷೆಯಿತ್ತಿರುವೆ. ಆಕೆ ನನ್ನನ್ನು ನಂಬಿರುವಳು. ತಾನು ದೂರ ಸರಿದರೂ ಕಮಲೆ ಬೆನ್ನು ಬಿಡಲಾರಳು. ಅಂತಾದರೇನು ಗತಿ? ಕಮಲೆಯನ್ನು ಮರೆತು ಬಿಡಲು ಮನವೊಡಂಬಡದು. ಸದ್ಯ ಆತಂಕ ತಂದೊಡ್ಡಿದುದು ಹೊಟ್ಟೆಯೊಳಗಿನ ಮಗು. ಅದನ್ನಿಲ್ಲವಾಗಿಸಿದರೆ ಎಲ್ಲವೂ ಸರಿಹೋ

ಗುವುದು" ಎಂದು ನಿರ್ಧರಿಸಿದರು. ಆ ಸಂಗತಿಯನ್ನು ಕಮಲೆಗೂ ನಾನಾ ರೀತಿಯಲ್ಲಿ ಹೇಳಿ ಬೋಧಿಸಿದರು. ಆದರೆ ಕಮಲೆ ಗರ್ಭ ಪಾತ ಮಾಡಿಕೊಳ್ಳಲೊಪ್ಪಲಿಲ್ಲ. ಕೃಷ್ಣಭಟ್ಟರು ಗದರಿಸಿ ನೋಡಿದರು. ಫಲವಿಲ್ಲದಾಯಿತು. ಕಮಲೆಯೂ ಚಿಲ್ಲರೆ ಮೂರ್ತಿಯಾಗಿರಲಿಲ್ಲ. ಕೃಷ್ಣಭಟ್ಟರಿಗಿಂತ ನೂರು ಮಡಿ ಮಿಗಿಲಾಗಿದ್ದಳು. "ಒಲಿದರೆ ನಾರಿ ಮುನಿದರೆ ಮಾರಿ—ಎಂಬುದನ್ನರಿತಿಲ್ಲವೇ ನೀವು, ಪ್ರವಾಹ ಮಧ್ಯದಲ್ಲಿ ಕೈಕೊಡವಿದರೆ ನಿಮ್ಮ ಮರ್ಯಾದೆ ಸಂಪೂರ್ಣ ತೆಗೆದುಬಿಡುವೆನು. ನೀವು ಮುಖವೆತ್ತಿ ನಡೆಯಲಾಗದಂತೆಸಗುವೆ"ನೆಂದು ಮಾರ್ನುಡಿ ದಳು. ಕೃಷ್ಣಭಟ್ಟರಿಗೆ ಉಗುಳಲೂ ಅಲ್ಲ ನುಂಗಲೂ ಅಲ್ಲವೆಂದಾ ಯಿತು. "ಸರಳರೀತಿಯಲ್ಲಿ ಇವಳೊಡನರುಹಿ ಹಿತನುಡಿದಲ್ಲಿ ಉಳಿ ಗಾಲವಿಲ್ಲ. ಕುಟಿಲೋಪಾಯವನ್ನೇ ಕೈಗೊಳ್ಳಬೇಕು. ಎದುರಿಗೆ ಬೆಣ್ಣೆಯಂತಿವಳಲ್ಲಿ ವರ್ತಿಸಬೇಕು. ಕಾರ್ಯ ಸಾಧಿಸಿ ಮಾನಮ ರ್ಯಾದೆಗಳನ್ನುಳಿಸಿಕೊಳ್ಳಲೇ ಬೇಕು. ಬಂದದ್ದೆಲ್ಲಾ ಬರಲಿ, ಕೇಶ ವನ ದಯೆಯೊಂದಿರಲಿ. ಅರಿಯದಂತೆ ಜಾರಿಕೊಳ್ಳುವೆ"ನೆಂದು ಕೃಷ್ಣ ಭಟ್ಟರು ಮನದಲ್ಲಿ ಬಗೆದರು.

ಕೃಷ್ಣಭಟ್ಟರು ತೋರಿಕೆಯ ಮಟ್ಟಿಗೆ ಕಮಲೆಯನ್ನು ಸಂತೈಸಿ ದರು. ಅಸ್ವಾರಸ್ಯವೊಂದಿಷ್ಟೂ ಹೊರಗೆಡವದಾದರು. ಎಂದಿನಂತೆ ನಡಕೊಳ್ಳತೊಡಗಿದರು. ಆರೋಗ್ಯವಾಗಿರಲಿಕ್ಕೆ ಎಂದು ಆಗಾಗ ಟಾನಿಕ್ಕುಗಳನ್ನು ಕಮಲೆಗೀಯತೊಡಗಿದರು. ಪ್ರಿಯಕರನು ಪ್ರೀತಿ ಯಿಂದ ತಂದಿತ್ತುದನ್ನು ನೇವಿಸದಿರಬಾರದೆಂದು ಕಮಲೆ ತಂದುದ ನ್ನೆಲ್ಲಾ ಸರಿಯಾಗಿ ಸೇವಿಸತೊಡಗಿದಳು. ಹೀಗಿರಲು ಕೆಲದಿನಗಳು ಕಳೆದ ನಂತರ ಕೃಷ್ಣಭಟ್ಟರು "ಇದೊಂದು ಉತ್ತಮ ತರಗತಿಯ ಟಾನಿಕ್ಕು. ಇದನ್ನು ಸರಿಯಾಗಿ ಎರಡು ಮೂರು ಬಾರಿ ಸೇವಿಸು. ಬಹಳ ಹುಶಾರಾಗುವಿ." ಎಂದೆನುತ್ತಾ ಬಾಟ್ಲಿಯೊಂದನ್ನು ಕಮಲೆಯ ಕೈಗಿತ್ತರು. ಅರಿಯದ ಕಮಲೆಯದನ್ನು ಸೇವಿಸಿದಳು. ಸೇವಿಸಿದ ಮರುದಿನವೇ ಆಕೆಗೆ ಅಸಾಧ್ಯ ಹೊಟ್ಟೆ ನೋವು ತೊಡಗಿತು. ಹೊಟ್ಟೆ ನೋವು ಸಹಿಸಲಸದಳವಾಗಿ ಜ್ವರವೂ ಕೆಂಡದಂತೆ ಕಾಯತೊಡಗಿತು.

"ಸಂಜೆಗೆ ಕೃಷ್ಣ ಭಟ್ಟರು ಬರುವರು. ತಕ್ಕ ಚಿಕಿತ್ಸೆ ಮಾಡುವರು." ಎಂದು ನಂಬಿ ಕಮಲೆ ನರಳುತ್ತಾ ಚಾಪೆಯಲ್ಲಿ ಹೊರಳಾಡ ತೊಡಗಿದಳು. ಪ್ರತಿದಿನವೂ ತಪ್ಪದೆ ಬರುವ ಕೃಷ್ಣ ಭಟ್ಟರ ಸುಳಿವು ಅಂದಿಲ್ಲ. ಕಾಯಿಲೆ ಕ್ಷಣಕ್ಷಣಕ್ಕೂ ಹೆಚ್ಚುತ್ತಿರುವಂತೆ ಭಾಸವಾಗುತ್ತಿತ್ತು. ಕೃಷ್ಣ ಭಟ್ಟರು ಬಾರದಿರುವುದರಿಂದ ಚಾಣಾಕ್ಷಳಾದ ಕಮಲೆಗೆಲ್ಲವೂ ಮುಂದಟ್ಟಾಯಿತು. ಬೆಳಗಾಗಲಿ. ತದನಂತರ ತಕ್ಕ ಪ್ರತಿಕ್ರಿಯೆ ಮಾಡುವೆ. ಎಂದು ಕಮಲೆ ಬೆಳಗಾಗುವ ತನಕ ಹೇಗೂ ಸೈರಿಸಿದಳು. ಬೆಳಗ್ಗೆ ಮುದುಕಿ ತಾಯಿಗರುಹಿ ನೆರೆಕರೆಯವರ ಸಹಾಯ ಪಡೆದು ವಾಹನದಲ್ಲಿ ಗವರ್ಮೆಂಟ್ ಆಸ್ಪತ್ರೆಯೆಡೆಗೆ ಸಾಗಿದಳು. ಹೋಗಿ ರೋಗಿಗಳ ಸಾಲಲ್ಲಿ ಸೇರಿದಳು. ಸರಕಾರಿ ಡಾಕ್ಟರರು ಪರೀಕ್ಷಿಸಿ ನೋಡಿದರು. ಇಷ್ಟೆಲ್ಲಾ ನಡೆದಾಗ ಕಮಲೆಗೆ ಆಗಾಗ ಸ್ಮೃತಿಯೇ ಇಲ್ಲದಾಗುತ್ತಿತ್ತು. "ಕರುಳು ಬೆಂದಿದೆ. ಪರಿಸ್ಥಿತಿ ಕೈಮೀರಿದೆ. ಇಂಜೆಕ್ಷನ್ ಕೊಟ್ಟು ನೋಡುವ" ಎಂದು ಮಾತ್ರ ಡಾಕ್ಟರರು ಹೇಳಿದರು. ಔಷಧವಾಗಲಿ ಇಂಜೆಕ್ಷನ್ ಆಗಲಿ ಯಾವುದೂ ಫಲವಿಲ್ಲದಾಯಿತು. ಕಮಲೆ ಮರಣವನ್ನಿದಿರು ನೋಡತೊಡಗಿದಳು. ಸ್ಮೃತಿಯೊಮ್ಮೊಮ್ಮೆ ಬಂದಾಗ ಕೃಷ್ಣ ಭಟ್ಟರ ಮೇಲೆ ಕಿಡಿಕಾರುತ್ತಿದ್ದಳು. "ತಾನೆಂತೂ ಬದುಕುವಂತಿಲ್ಲ. ಮೋಸವೆಸಗಿದ ಕೃಷ್ಣ ಭಟ್ಟರಿಗೆ ತಕ್ಕ ಪ್ರಾಯಶ್ಚಿತ್ತವನ್ನೆಸಗಲೇ ಬೇಕು" ಎಂದು ದೃಢನಿರ್ಧಾರ ಮಾಡಿದಳು. ಡಾಕ್ಟರರನ್ನು ಹತ್ತಿರ ಬರುವಂತೆ ಮಾಡಿ ಸಂಪೂರ್ಣ ವಿವರಗಳ ವರದಿ ಬರೆದು ತಕ್ಕೊಳ್ಳುವಂತೆ ಮಾಡಿದಳು. ಬರೆದ ವರದಿಗೆ ಹೆಬ್ಬೆಟ್ಟೊತ್ತಿದಳು. ಅದರ ನಕಲೊಂದನ್ನು ಪೋಲೀಸು ಸ್ಟೇಶನಿಗೂ ಹೋಗುವಂತೆಸಗಿದಳು. ಇಷ್ಟು ಕೆಲಸ ಮಾಡಿ ಮನಸ್ಸಿಗೊಂದಿಷ್ಟು ನೆಮ್ಮದಿ ತೆಗೆದುಕೊಂಡಳು. "ಇಂತಹ ಕಲ್ಮಷಕ ಜೀವನಕ್ಕೆ ಧಿಕ್ಕಾರವಿರಲಿ. ನನ್ನನ್ನು ನೋಡಿ ಭಗಿನಿಯರು ಸಮಾಜದಲ್ಲೆಚ್ಚರಗೊಳ್ಳಲಿ. ಪಾಪಿ ಜೀವವೇ! ಹೋಗು ಹೋಗು" ಎಂದೆನ್ನುತ್ತಾ ಕಣ್ಣುಗಳನ್ನು ಮುಚ್ಚಿದಳು. ಮುಚ್ಚಿದ ಕಣ್ಣುಗಳನ್ನು ಮತ್ತೆ ಕಮಲೆ ತೆರೆಯಲಿಲ್ಲ.

ಕಮಲೆಯಾಸ್ಪತ್ರೆಯೆಡೆಗೆ ಸಾಗಿದಳು. ತನಗೆ ವಿರೋಧವಾಗಿ ವಾಜ್ಮೂಲವಿತ್ತು ಪರಂಧಾಮವನ್ನೈದಿದಳು. ಹೆಬ್ಬೆಟ್ಟೊತ್ತಿ ವರದಿ ಬರಿಯಿಸಿದಳು. ಕಠೋರವಾಗಿ ವರ್ತಿಸಿದಳೆಂದು ತಿಳಿದಾಗ ಕೃಷ್ಣಭಟ್ಟರಿಗೆ ಜಗತ್ತೇ ಗರಗರನೆ ತಿರುಗುವಂತೆ ತೋರಿತು. ದಿಗ್ಭ್ರಮೆ ಹಿಡಿಯಿತು. "ಇನ್ನೇನು ಮಾಡಲಿ? ಏನು ಗತಿ?" ಎಂದು ಗೆಳೆಯ ಕುಂಞರಾಮನೊಡನೆ ಸಲಹೆ ಕೇಳಿದರು. ಕುಂಞರಾಮನೂ ಪರಿಸ್ಥಿತಿ ಇಂತೊದಗಿ ಬರಬಹುದೆಂದು ವಿಚಾರ ಮಾಡಿರಲಿಲ್ಲ. ಒಂದೆರಡು ದಿನ ಜ್ವರ ಬಂದು ಗರ್ಭಪಾತವಾಗುವುದೆಂದು ಮಾತ್ರ ತಿಳಿದಿದ್ದನು. ಅಕಸ್ಮಾತ್ ಪ್ರಾಣಕ್ಕೇ ಸಂಚಕಾರ ಬಂದೊದಗಿ ಈ ರೀತಿಯಾಗಬಹುದೆಂದು ಕನಸಿನಲ್ಲೂ ಯೋಚಿಸಿರಲಿಲ್ಲ. ಯಾರೋ ಒಬ್ಬರು ಹೇಳಿದ ಔಷಧವೆಂದು ಗುಟ್ಟಿನಲ್ಲಿ ತರಿಸಿ ಕೃಷ್ಣ ಭಟ್ಟರಿಗಿತ್ತಿದ್ದನು. ಈಗೇನು ಮಾಡುವುದೆಂದು ಅವನೂ ಅರಿಯದಾದನು. ಕ್ಷಣಕಾಲ ದಿಙ್ಮೂಢನಾದನು. ಆದರೂ ಆತ ಪ್ರತ್ಯುತ್ಪನ್ನಮತಿಯಾಗಿದ್ದನು. ಕೃಷ್ಣ ಭಟ್ಟರಿಗೆ ಸಾಕಷ್ಟು ಹಣ ಮನೆಯಲ್ಲಿದೆ. ಹಣವಿದ್ದರೆ ಯಾವ ಕೆಲಸವೂ ಆಗದಿರದು ಎಂದಾತ ದೃಢವಾಗಿ ತಿಳಿದಿದ್ದನು. ಆದುದರಿಂದ ಇದಕ್ಕೆ ಹೀಗೆ.... ಹೀಗೆ .....ಎಂದು ಕೃಷ್ಣ ಭಟ್ಟರ ಕಿವಿಯಲ್ಲಿ ಮಂತ್ರಾಲೋಚನೆಮಾಡಿದನು.

ಒಂದು ನಿಮಿಷವೂ ಕಾಲ ಕಳೆಯಬಾರದು. ನಿಮಿಷವೊಂದು ಕಳೆದಲ್ಲಿ ಯುಗದಾಟಿದ ಹಾಗೆ ಎಂದೆನ್ನುತ್ತಾ ಕೃಷ್ಣ ಭಟ್ಟರೂ ಕುಂಞರಾಮನೂ ಬಾಡಿಗೆಗೆ ಕಾರೊಂದನ್ನು ನಿಶ್ಚೈಸಿದರು. ನಾಗಾಲೋಟದಿಂದ ವಾಸುದೇವ ಭಟ್ಟರಲ್ಲಿಗೆ ಬಂದರು. ಅನಿರೀಕ್ಷಿತವಾಗಿ ಕಾರು ಮಾಡಿಕೊಂಡು ಮಗುದೊಬ್ಬನ ಸಂಗಡ ಕೃಷ್ಣ ಭಟ್ಟರು ಏನು ಬಂದುದಪ್ಪಾ ಎಂದು ವಾಸುದೇವ ಭಟ್ಟರು ಕಕ್ಕಾಬಿಕ್ಕಿಯಾದರು. ಕೃಷ್ಣ ಭಟ್ಟರು ಮುಖ ಮೇಲೆತ್ತುತ್ತಿರಲಿಲ್ಲ. ಕುಂಞರಾಮನೂ ಸಪ್ಪೆಯಾಗಿದ್ದ. ಕೃಷ್ಣ ಭಟ್ಟರು ಕಣ್ಣೀರಿಳಿಸುತ್ತಾ "ಮರ್ಯಾದೆ ಹೋಗುವ ಪ್ರಸಂಗ ಬಂದಿದೆ. ಬದುಕಿಸಿರಿ" ಎಂದೆನ್ನುತ್ತಾ ತಂದೆಯವರಡಿಗಳಿಗೆರಗಿದರು.

"ಏನಪ್ಪಾ ಇದು. ಬಹು ವಿಚಿತ್ರ ವರ್ತನೆ. ಕೆಲವರ್ಷಗಳಿಂದ ದೇವರಿಗೆ ಸಹ ಅಡ್ಡಬೀಳದ ನೀನು ಉದ್ದಂಡ ಬಿದ್ದುಬಿಟ್ಟೆ. ಏನು ಪ್ರಮಾದವಾಯಿತು, ಎದ್ದೇಳು. ನನ್ನಿಂದೇನಾಗಬೇಕು? ಹೇಳಪ್ಪಾ ಹೇಳು" ಎಂದೆನ್ನುತ್ತಾ ವಾಸುದೇವ ಭಟ್ಟರು ಪುತ್ರನನ್ನು ಮೈದಡವಿ ಎತ್ತಿಕುಳ್ಳಿರಿಸಿದರು. ಕೃಷ್ಣ ಭಟ್ಟರಿಗೆ ಹೃದಯದಲ್ಲಿ ತುಸು ಧೈರ್ಯ ಹುಟ್ಟಿತಾದರೂ ನಾಲಿಗೆ ಮಾತ್ರ ಹೊರಡಲಿಲ್ಲ. ಪೆಚ್ಚುಮೋರೆ ಮಾಡಿ ಕಣ್ಣೀರು ಮಾತ್ರ ಇಳಿಸಿದರು. "ಏನಾಯಿತು? ಏನು ಸಂಗತಿ? ನೀನಾದರೂ ಅನ್ನಬಾರದೇ?" ಎಂದು ವಾಸುದೇವ ಭಟ್ಟರು ಕುಂಞಿ ರಾಮುನನ್ನು ಪ್ರಶ್ನಿಸಿದರು.

"ನಿಮ್ಮ ಪುತ್ರರತ್ನ ಕೃಷ್ಣ ಭಟ್ಟರು ನನ್ನ ಪ್ರಾಣಮಿತ್ರರು. ಅವ ರಾಯಿತು, ಅವರ ಕೆಲಸವಾಯಿತು. ಇನ್ನೊಬ್ಬರ ಗೋಜಿಗೆ ಹೋಗುವ ಸ್ವಭಾವ ಅವರದಲ್ಲ. ಅಷ್ಟೊಂದು ಸ್ಟ್ರಿಕ್ಟ್ ಮರ್ಜಿ ಅವರದು. ಹೀಗಿ ದ್ದರೂ ಕಮಲೆಯೆಂಬ ಒಬ್ಬಾಕೆಯೊಬ್ಬ ಕುಲಗೆಟ್ಟ ಹೆಣ್ಣು ಇವರ ಮೇಲೆ ಅಲ್ಲಸಲ್ಲದ-ದೂರು ಹೊರಿಸಿ ಆಸ್ಪತ್ರೆಯಲ್ಲಿ ಪ್ರಾಣಸೀಗಿದಳು. ಒಟ್ಟಾರೆ ಕಾಲ ಕೆಟ್ಟುದು. ಯಾರಿಂದಲೋ ಗರ್ಭ ಧರಿಸಿ ಓರ್ವನನ್ನು ಹೆಸ ರಿಡಬೇಕಲ್ಲ ಎಂದು ಪಾಪದ ಕೃಷ್ಣ ಭಟ್ಟರ ಹೆಸರು ಹೇಳಿ ಕಂಡಾ ಬಟ್ಟೆ ಬಾಯಿಗೆ ಬಂದಂತೆ ಅಪವಾದ ಹೊರಿಸಿ ಬಾಕಿಯುಳಿದವರಿಗೆ ಗಂಟಲಿಗೆ ಬರುವಂತೆಸಗಿದಳು. ಆದುದರಿಂದ ಈಗ ಗವರ್ಮೆಂಟ್ ಕೇಸು ಇವರ ಮೇಲೆ ಬರುತ್ತದೆ. ನಿಮ್ಮ ಮಗ ಆಕೆ ಚಾಡಿ ಹೇಳಿ ದುದರಿಂದಲಾಗಿ ಜೈಲಿಗೆ ಹೋಗಬೇಕಾಗುತ್ತದೆ. ಮುಖ ನಾಲ್ಕು ಸಭ್ಯಜನರೆದುರು ತೋರಿಸದ ಹಾಗಾಗುವ ಸಂಭವ ಬಂದೊದಗಿದೆ. ಹೆಚ್ಚಿಗೇನು ಹೇಳಲಿ. ನೀವು ಮನವಿಟ್ಟು ಗಟ್ಟಿಯಾಗಿ ಕೆಲಸಕ್ಕಿಳಿಯ ದಿದ್ದರೆ ಯದ್ವಾತದ್ವಾ ಆಗಿಯೇ ಬಿಡುವುದು." ಎಂದು ಕುಂಞಿರಾಮು ತಡವರಿಸಿ ಉಗುಳು ನುಂಗುತ್ತಾ ಹೇಳಿದನು.

"ಏನಾದರೊಂದಿಷ್ಟಿಲ್ಲದೆ ಹೀಗೆಲ್ಲಾ ಆಗಲಿಕ್ಕಿಲ್ಲ. ಗಾಳಿಬಾರದೆ ಮರ ಅಲುಗದು. ದುರ್ವಾಸನೆ ಮರೆಮಾಡಿಟ್ಟರೂ ಗಾಳಿ ಬೀಸಿದಾಗ

ಮೂಗಿಗೆ ಬಡಿಯದಿರದು. ಅಡಗಿಸಿ ಹೇಳಬೇಡಿರಿ" ಎಂದು ವಾಸುದೇವ ಭಟ್ಟರೆಂದಾಗ ಕೃಷ್ಣ ಭಟ್ಟರ ಮೊಗ ವಾದಗಳೆಡೆಯಲ್ಲಿ ಮುದುಡಿ ಹೋಯಿತು. ಕುಂಞಿರಾಮ ನಿರ್ವಿಣ್ಣನಾದ. "ತುಸು ಇತ್ತ ಕಡೆ ಬನ್ನಿ" ಎಂದು ತುಸುದೂರ ಕರಕೊಂಡು ಹೋಗಿ ಕುಂಞಿರಾಮ ನಡೆದ ವಿಷಯಗಳನ್ನೆಲ್ಲಾ ವಾಸುದೇವ ಭಟ್ಟರಿಗರುಹಿದನು. ಸಂಗತಿ ತಿಳಿದಾಗ ವಾಸುದೇವ ಭಟ್ಟರಿಗೇನು ಮಾಡುವುದೆಂದು ತೋಚದಾಯಿತು. ಹಣ ನೀರಿನಂತೆ ವ್ಯಯಮಾಡಿದರೆ ಕೆಲಸ ಪೂರೈಸೀತು. ಆದರೆ ಧನವೇ ಜೀವಾಳವಾಗಿರಲು ಅದನ್ನು ಹಾಳುಮಾಡಲು ಮನ ವೊಪ್ಪದಿದ್ದರೂ "ಮಗ ಜೈಲಿಗೆ ಹೋಗಿ ಕುಲಕ್ಕೇ ಅಪಕೀರ್ತಿ ಬರುವುದಲ್ಲ. ಮಾನವುಳಿಸಿದ ಮೇಲೆ ಬಾಕಿಯುಳಿದ ವಿಷಯಗಳ ಪ್ರಶ್ನೆ" ಎಂದು ವಾಸುದೇವ ಭಟ್ಟರು ಮನದಲ್ಲಿ ಮಥಿಸಿ ನಿರ್ಣೈಸಿದರು. ಚಿಕ್ಕ ಮಗನಿಗೂ ಗಂಗಮ್ಮನಿಗೂ ಬಂದೊದಗಿದ ಗಂಡಾಂತರವನ್ನು ಸೂಕ್ಷ್ಮವಾಗಿ ತಿಳಿಸಿದರು. "ಹೇಗಾದರೂ ಮಾಡಿ ಕುಲಮರ್ಯಾದೆ ಯುಳಿಸುವೆನು. ಭಾವ ಶಂಭುಭಟ್ಟರೊಡಗೂಡಿ ಮನುಷ್ಯ ಪ್ರಯತ್ನ ಸಂಪೂರ್ಣಮಾಡುವೆನೆಂದೆನ್ನುತ್ತಾ ಪೆಟ್ಟಿಗೆಯ ಬಾಗಿಲು ತೆರೆದು ನೋಟಿನ ಕಟ್ಟುಗಳನ್ನು ಹೊರತೆಗೆದು ಜೇಬಿಗೆ ತುರುಕಿಕೊಂಡರು. ಅವಸರವಸರವಾಗಿ ಉಡುಪು ಧರಿಸಿ ಕೃಷ್ಣ ಭಟ್ಟ ಕುಂಞಿರಾಮ ಇವರೊಂದಿಗೆ ಕಾರೇರಿ ಶಂಭು ಭಟ್ಟರಲ್ಲಿಗೆ ತೆರಳಿದರು. ಅಲ್ಲಿಂದ ಶಂಭು ಭಟ್ಟರೊಡಗೂಡಿ ಬೆಳಗಾಗುವ ಮೊದಲೇ ಕಾಸರಗೋಡಿಗೆ ತಲಪಿದರು.

ಇವರು ಬಂದವರೇ ಕಾಸರಗೋಡಿನ ಸುಪ್ರಸಿದ್ಧ ವಕೀಲರಾದ ತಮ್ಮ ನಂಬ್ರಗಳನ್ನು ಪೂರೈಸುವ ಸುಂದರರಾಯರ ನೆರವು ಪಡೆದರು. ಅವರ ಮುಖಾಂತರ ಸರಕಾರಿ ಡಾಕ್ಟರರನ್ನೂ ಪೋಲೀಸಧಿಕಾರಿಗಳನ್ನೂ ಗುಟ್ಟಿನಲ್ಲಿ ಕಂಡು ಮಾತನಾಡಿದರು. ಹಣ ಸುರಿದ ಫಲವಾಗಿ ಕೆಲಸಗಳೆಲ್ಲಾ ಸುಗಮವಾದುವು. "ಕಮಲೆಯ ದಸ್ಕತ್ತಿರುವ ಅರ್ಜಿಯನ್ನು ಕೋರ್ಟಿಗೆಳೆಯದೆ ನಿರ್ವಾಹವಿಲ್ಲ. ನಾವೆಲ್ಲ ನಿಮಗನುಕೂಲ. ಕಮಲೆಯ ತಾಯಿ ಬಡಮುದುಕಿಯನ್ನು ಹೇಗಾದರೂ ಸಮಜಾಯಿಸಿ ಬಾಯಿ ಮುಚ್ಚಿಸಿರಿ. ನಿಮಗನುಕೂಲವಾಗಿ ಆಕೆ

ಹೇಳಿಕೆ ಕೊಡುವಂತೆ ಮಾಡಿರಿ" ಎಂದು ವಕೀಲರೂ ಡಾಕ್ಟರರೂ ಪೋಲೀಸಧಿಕಾರಿಗಳೂ ಸಲಹೆ ನೀಡಿದರು. ಇನ್ನುಳಿದ ದೊಡ್ಡ ಕೆಲಸ ಕಮಲೆಯ ತಾಯಿ ದುರ್ಗವ್ವನನ್ನು ಸಮಜಾಯಿಸುವುದೊಂದು. ಈ ಕೆಲಸ ಮಾಡುವವರಾರು? ಮಗಳನ್ನು ಕಳಕೊಂಡ ಶೋಕಾವಿಷ್ಟ ಮುದುಕಿಯೆದುರು ಅಪರಾಧಿಯಾದ ಕೃಷ್ಣ ಭಟ್ಟರು ಮೊಗದೋರುವುದಾದರೂ ಹೇಗೆ? ಅಪರಿಚಿತರಾದ ಶಂಭು ಭಟ್ಟರೂ ವಾಸುದೇವ ಭಟ್ಟರೂ ಮನಗೆಟ್ಟವರಂತೆ ಅವಳಲ್ಲಿಗೆ ತೆರಳಿ ಕೈ ಜೋಡಿಸಿ ಪ್ರಾರ್ಥಿಸಿಕೊಳ್ಳಲಾಗುವುದೇ? ಕುಂಞಿರಾಮನೇ ಈ ಕೆಲಸ ಸಾಧಿಸಬೇಕೆಂದು ನಿರ್ಣಯವಾಯಿತು. ಕುಂಞಿರಾಮನೂ ಗೆಳೆಯನಿಗಾಗಿ ಇಷ್ಟೊಂದು ಕೆಲಸ ಮಾಡದಿರುವನೇ? ರೂಪಾಯಿ ನಾನ್ನೂರು ಇಸಕೊಂಡು ಮುದುಕಿ ದುರ್ಗವ್ವಳನ್ನು ಸಮಾಧಾನಪಡಿಸುವೆನೆಂದು ಭರವಸೆಯಿತ್ತನು.

ಕುಂಞಿರಾಮ ಮುದುಕಿಗೀಯಲಾಗಿ ವಾಸುದೇವ ಭಟ್ಟರಿತ್ತ ಹಣ ಪಡಕೊಂಡು ತನ್ನ ಪ್ರೇಯಸಿಯಾದ ಶಾರದೆಯಲ್ಲಿಗೆ ತೆರಳಿದ. ಹೆಂಗಸರನ್ನು ಸಮಜಾಯಿಸುವ ಕೆಲಸ ಹೆಂಗಸರಿಂದಲೇ ಆದರೆ ಉತ್ತಮ. ಅದಕ್ಕಾಗಿ ಶಾರದೆಯ ನೆರವನ್ನು ಕೋರಿದನು. "ಭ್ರಷ್ಟರಾದ ಪುರುಷರ ನಡತೆಯೇ ಹೀಗೆ. ಎಂತಹ ಅನ್ಯಾಯ. ಇದ್ದಕ್ಕಿದ್ದಂತೆ ಗಟ್ಟಿಮುಟ್ಟಾಗಿ ಕಲ್ಲಿನಂತಿದ್ದ ತನ್ನ ಒಡನಾಡಿ ಕಮಲೆಯ ಜೀವ ತೆಗೆದುದಕ್ಕೆ ಕೃಷ್ಣ ಭಟ್ಟರಿಗೆ ತಕ್ಕ ದಂಡನೆ ಸಿಗಲೇಬೇಕು. ಮುದುಕಿ ದುರ್ಗವ್ವನನ್ನು ಸಮಾಧಾನಪಡಿಸಿ ಕೃಷ್ಣ ಭಟ್ಟರಿಗೆ ಹಿತವೆಸಗುವ ಕೆಲಸವನ್ನು ಮಹಾಪಾಪವನ್ನು ನಾನೆಸಗಲಾರೆ. ನೀವೂ ಆ ಕೃಷ್ಣ ಭಟ್ಟರಿಗೆ ಸಹಕಾರ ನೀಡಬಾರದು. ಹೆಂಗಸರೆಂದರೆ ಕೀಟಗಳೆಂಬ ಭಾವನೆಯೇ?" ಎಂದು ಶಾರದೆ ನುಡಿದಳು.

"ಹಾಗಲ್ಲ. ಕಮಲೆಗೂ ಒಂದಿಷ್ಟು ಬುದ್ಧಿಬೇಕಿತ್ತು. ಕೃಷ್ಣ ಭಟ್ಟರು ಗುಟ್ಟುರಟ್ಟಾಗದಂತೆ ಸಹಕರಿಸೆಂದು ಅಂಗಲಾಚಿ ಕೇಳಿಕೊಳ್ಳುವಾಗ ಸಹಕರಿಸಿದರೇನಾಗುತಿತ್ತು? ಪ್ರಪಂಚ ತಲೆಕೆಳಗಾಗುತಿತ್ತೆ. ಸುಖಪಡೆಯಬಾರದಿತ್ತೇ. ಕೃಷ್ಣ ಭಟ್ಟರೂ ಬೇಕೆಂದು ಹಾಗೆ

ಮಾಡಿದವರಲ್ಲ. ಔಷಧ ಅದಲುಬದಲಾಗಿ ಏನೋ ಪ್ರಮಾದ ನಡೆ ಯಿತೆಂಬುದನ್ನು ನಾನರಿತಿರುವೆ. ಈಗ ಮುದುಕಿಯನ್ನಾದರೂ ನಾವು ಸುಮ್ಮಗೆ ಬಾಯಿ ಮಾತಿನಿಂದ ಸಮಾಧಾನ ಮಾಡಬೇಕಾದ್ದಿಲ್ಲ; ನಾನ್ನೂರು ರೂಪಾಯಿ ಆಕೆಗೀಯಲು ನನ್ನೊಡನೆ ಕೊಟ್ಟಿಹರು. ಅವಳನ್ನು ಸಮಜಾಯಿಸಿ ಸಾಧ್ಯವಾದಲ್ಲಿ ಒಂದ್ಯೆವತ್ತು ರೂಪಾಯಿ ಗಳನ್ನು ನೀನದರಲ್ಲಿ ತಕ್ಕೊಂಡರಾರು ಬೇಡವೆನ್ನುವರು. ನೋಡು ಈ ಕೆಲಸ ನಿನ್ನಿಂದಲೇ ಆಗಬೇಕು" ಎಂದು ಕುಂಞಿರಾಮನಂದಾಗ ಶಾರದೆಯು ಮೊಗವರಳಿತು.

"ಹಾಗೋ? ಅಂತಿದ್ದರೆ ಆ ರೂಪಾಯಿಗಳನ್ನಿತ್ತ ನನ್ನ ಕೈಗಿತ್ತು ಬಿಡಿರಿ. ಬರಿಯ ಇನ್ನೂರು ರೂಪಾಯಿಗಳನ್ನು ದುರ್ಗವ್ವನಿಗಿತ್ತು ಬೇಕಾದಂತೆ ತಿರುಗಿಸಿ ಬಿಡುವವಳು ನಾನು. ಬಾಕಿ ಹಣ ನಮಗಾ ಯಿತು. ಸತ್ತ ಕಮಲೆ ಇನ್ನು ಬರುವಳೇ? ಸಿಕ್ಕಿದ ಹಣ ನಮ ಗೊಂದಿಷ್ಟು ಮಜಾ ಮಾಡಲಾಯಿತು." ಎಂದೆನ್ನುತ್ತಾ ಶಾರದೆ ಕುಂಞಿ ರಾಮನ ಕೈಯಿಂದ ಆ ಹಣ ಹಿಡಿದೆಳೆದು ತೆಗೆದು ಪೆಟ್ಟಿಗೆಯಲ್ಲಿ ಭದ್ರ ವಾಗಿರಿಸಿದಳು.

ಮುದುಕಿ ದುರ್ಗವ್ವ ಮಗಳು ಸತ್ತ ಚಿಂತೆಯಿಂದ ಮೂಲೆ ಹಿಡಿದು ಕಣ್ಣೀರಿಡುತ್ತಿದ್ದಳು. ಶಾರದೆ ಬಂದಿಹಳೆಂದು ಆಕೆ ಹಿಡಿದಲು ಗಿಸಿದನಂತರವೇ ತಿಳಿದಳು. ಶಾರದೆಯನ್ನು ಕಂಡಾಗ ಮುದುಕಿ ದುರ್ಗವ್ವ ಮತ್ತಷ್ಟು ದುಃಖಭಾರದಿಂದ ಬಸವಳಿದು ಘೋರಾಗಿ ಅಳ ತೊಡಗಿದಳು. ಆಗ "ಅಮ್ಮಾ ಅಕ್ಕ ಹೋದಳೆಂದು ಕೊರಗಿಕೊರಗಿ ಕೃಶಳಾಗಿರುವೆಯಲ್ಲ. ನಿನ್ನಂತೆಯೇ ನನಗೂ ಬಹಳ ದುಃಖವಾಗು ತ್ತಿದೆ. ಆದರೇನು ಮಾಡುವುದು. ಅಳುತ್ತಾ ಕುಳಿತರೆ ಸತ್ತವರು ಬರುವರೇ? ಒಂದಿಷ್ಟು ದುಗುಡದ ಭಾರಸಹಿಸಿ ಸಮಾಧಾನ ತಕ್ಕೊಳ್ಳ ಬೇಕು. ಜೀವಬಿಟ್ಟವರು ಸುಖಿಗಳು ಜೀವವಿರುವ ನಾವೇ ದುಃಖಿ ಗಳು. ಜೀವವಿರುವತನಕ ಹೇಗಾದರೂ ಬದುಕಬೇಕಲ್ಲ. ಹೀಗೆ ಅಳುತ್ತಾ ಕುಳಿತರೆ ಮುಂದಿನ ಗತಿ ಏನು? ನಾನು ನಿನ್ನ ಮಗಳೆಂದು

ತಿಳಿದುಕೋ. ನಿನಗೆ ಸರ್ವವಿಧದಲ್ಲಿಯೂ ಬೇಕುಬೇಕಾದ ಸಹಾಯ ನೀಡುವೆ. ಅಮ್ಮಾ ಅಳದಿರು" ಎಂದು ಶಾರದೆ ಮುದುಕಿಯನ್ನು ಸಮಾಧಾನಪಡಿಸತೊಡಗಿದಳು.

"ಮಗಳೇ ನೀನನ್ನುವುದು ನಿಜ. ಅತ್ತು ಪ್ರಯೋಜನವಿಲ್ಲವಾದರೂ ಅಳು ತಾನಾಗಿ ಬರುತ್ತದೆ. ಮಗಳಾದ ಕಮಲೆಯಿಲ್ಲದೆ ನಾನು ಬದುಕುವುದಾದರೂ ಹೇಗೆ? ನನಗನ್ನನೀಡುತ್ತಿದ್ದ ಪ್ರೀತಿಯ ಪುತ್ಥಳಿ ಮಗಳು ಹೋದಳೆಂದಾಗ ಎದೆಯೊಡೆದು ಹೋಯಿತು. ಆದರೂ ಈ ಹಾಳುಜೀವ ಹೋಗಿಲ್ಲ. ಆ ಕೃಷ್ಣ ಭಟ್ಟ ನನಗೂ ಒಂದಿಷ್ಟು ವಿಷ ಕೊಟ್ಟಿದ್ದರೆ ಚೆನ್ನಾಗಿತ್ತು. ನೀನಾದರೂ ನನಗೊಂದು ಮುಕ್ಕಾಲಿನ ವಿಷ ಕುಡಿಸಿಬಿಡು" ಎನ್ನುತ್ತಾ ದುರ್ಗವ್ವ ಶಾರದೆಯನ್ನು ತಬ್ಬಿ ಜೋರುಜೋರು ಅಳತೊಡಗಿದಳು.

"ಅಮ್ಮಾ ಹೀಗೆಲ್ಲಾ ಅನ್ನಬಾರದು. ಕಳೆದುದು ಕಳೆದುಹೋಯಿತು. ನೀನು ಮುದುಕಿ. ಆ ಕೃಷ್ಣ ಭಟ್ಟರು ಏನೋ ಗ್ರಹಚಾರ ವಶಾತ್ ಹೀಗೆ ಮಾಡಿಬಿಟ್ಟರು ಏನೋ ಕಾಲ ಬಂದೊದಗಿತು. ಕಾಲ ಬಂದೊದಗದಿದ್ದರೆ ಕಲ್ಲು ತಲೆ ಮೇಲೆ ಹೊತ್ತು ಹಾಕಿ ಜಜ್ಜಿದರೂ ಜೀವ ಹೋಗಲಾರದೆಂದಿರುವಾಗ ಇದು ಒಂದು ಬರಿಯ ನೆಪಮಾತ್ರ ಆಯಿತು. ಎಲ್ಲಾ ದೈವೇಚ್ಛೆ. ಈಗ ಆ ಕೃಷ್ಣ ಭಟ್ಟರು ಪ್ರಮಾದ ವಶಾತ್ ಅಂತಾದುದಕ್ಕೆ ಪಶ್ಚಾತ್ತಾಪಪಡುತ್ತಿದ್ದಾರೆ. ನೀನು ಬದುಕಿರುವಾಗ ತುಸುಮುಟ್ಟಿಗೆ ಸಹಾಯವಾಗುವಂತೆ ಸ್ವಲ್ಪ ದುಡ್ಡು ನಿಮಗೆ ಕೊಡಲು ಬಗೆದಿದ್ದಾರೆ ಕಮಲೆ ಇನ್ನು ಬರಲಾರಳು. ಅದುಕಾರಣ ನೀನು ನಿನ್ನ ದಾರಿ ನೋಡು. ಆ ಕೃಷ್ಣಭಟ್ಟರಿಗೆ ವಿರೋಧವಾಗಿ ಏನೂ ಹೇಳಬೇಡ. ಅವರವರ ಕರ್ಮದ ಫಲ ಅವರವರೇ ಅನುಭವಿಸಿತೀರುವರೆಂದಿರುವಾಗ ನಾವೇಕೆ ವಿರೋಧ ನಿಲ್ಲಬೇಕು. ಹಣ ಪಡೆದು ಸುಖವಾಗಿ ದಿನದೂಡುವ ಯೋಚನೆ ಮಾಡು" ಎಂದು ಮೆಲ್ಲ ಮೆಲ್ಲಗೆ ಶಾರದೆ ಹೇಳಿದಳು.

"ಆ ಕೊಲೆಪಾತಕಿಯ ಹಣ ಮುಟ್ಟಿದರೆ ಸತ್ತು ಸ್ವರ್ಗವೇರಿದ ಕಮಲೆ ನನ್ನ ಮೇಲೆ ಮುನಿಯುವಳು. ಆತನ ಹಣ ಚಿಕ್ಕಾಸೂ

ಕೂಡ ಬೇಡವೇಬೇಡ. ಮಗಳನ್ನವನೇ ಕೊಂದನೆಂದು ಸಾರಿಹೇಳುವೆ, ಡಂಗುರ ಸಾರುವೆ, ಭಿಕ್ಷೆಬೇಡಿ ಮಾರ್ಗದಲ್ಲಿ ಹೊರಳಾಡುವಂತಾದರೂ ಕೂಡ ಆ ಹಣ ಮುಟ್ಟಲಾರೆ" ಎಂದುಸುರುತ್ತಾ ಮುದುಕಿ ರೋಷ ತಾಳಿದಳು.

ಅಮ್ಮಾ ನೀನನ್ನುವುದು ನಿಜವೆನ್ನುವ. ಆದರೆ ಹಣ ಪಡೆದರೂ ಪಡೆಯದಿದ್ದರೂ ನಿನಗೇ ಒಳ್ಳಿತು. ಕೆಡುಕುಗಳಲ್ಲದೆ ಆ ಕಮಲೆಗಿನ್ನು ಒಳ್ಳೆಯದೂ ಇಲ್ಲ, ಕೆಟ್ಟದ್ದೂ ಇಲ್ಲ. ಹಣ ಕಡಿಮೆಯೆಂದು ಬಗೆದೆಯಾ? ಇನ್ನೂರು ರೂಪಾಯಿಗಳನ್ನು ಕೊಡುವರಂತೆ. ನಾನಂದಂತೆ ವರ್ತಿಸು. ನಾನು ಹಿತಕ್ಕನ್ನುವೆನಲ್ಲದೆ ದೋಷಕ್ಕೆ ಹೇಳುತ್ತಿರುವೆನೆಂದು ಬಗೆದೆಯಾ? ಅಲ್ಲದೆ ನೀನು ವಿರೋಧವಾಗಿ ಹೇಳಿಕೆಯಿತ್ತರೂ ಕೃಷ್ಣ ಭಟ್ಟರು ಹಣದ ಬಲದಿಂದ ಹೇಗೂ ಶಿಕ್ಷೆಯಾಗದೆ ಪಾರಾಗುವರು. ಆಗ ನಿನಗೇನು ಪುರುಷಾರ್ಥ ಬಂತು. ಆದ್ದರಿಂದ ಮತ್ತೂ ಮತ್ತೂ ಹೇಳುವೆ ಕೇಳು. ಸಿಕ್ಕಿದುದನ್ನು ಬಿಟ್ಟರೆ ಕಲಿತುದು ಬುದ್ಧಿಯಲ್ಲ" ಎಂದು ಶಾರದೆ ಭೇದೋಪಾಯ ಹೂಡಿದಳು.

ಶಾರದೆಯಿಂತೆನ್ನುವಾಗ ಮುದುಕಿ ತಣ್ಣಗಾದಳು. "ಹೇಗೂ ನೀನು ನನ್ನ ಮಗಳ ಹಾಗೆ. ಹೇಗೆ ಮಾಡಬೇಕು, ಏನು ಮಾಡಬೇಕು ಎಂದು ನೀನನ್ನುವಿಯೋ ಹಾಗೆ ಮಾಡುವೆ. ಎಲ್ಲಾ ಭಾರವನ್ನೂ ನಿನ್ನ ಮೇಲಿರಿಸಿದ್ದೇನೆ. ಇನ್ನು ಮೇಲೆ ನೀನೇ ನನಗೆ ಊರುಗೋಲಾಗ ಬೇಕು" ಎಂದು ಮುದುಕಿ ದುರ್ಗವ್ವ ಶಾರದೆಯೊಡನೆ ಮುಖ ಕಿರಿದು ಮಾಡಿ ನುಡಿದಳು.

"ಸರಿ. ಬೇಕಾದ ಏರ್ಪಾಡುಗಳನ್ನೆಲ್ಲಾ ನಾನೆಸಗುವೆ"ನೆಂದು ಶಾರದೆ ಧೈರ್ಯ ಹೇಳಿದಳು. ಮುದುಕಿ ದುರ್ಗವ್ವಳಿಗೆ ಇನ್ನೂರು ರೂಪಾಯಿಗಳನ್ನು ಕೊಟ್ಟು ಬಾಕಿಯುಳಿದುದನ್ನು ತಾನೇ ಇಟ್ಟು ಕೊಂಡಳು.

ಮುದುಕಿ ಕೃಷ್ಣ ಭಟ್ಟರಿಗೆ ವಿರೋಧವಾಗಿ ಹೇಳಿಕೆ ಕೊಡಲಿಲ್ಲ. ಕೇಸಿನ ದಾರಿಗಳೆಲ್ಲಾ ಕೃಷ್ಣ ಭಟ್ಟರಿಗನುಕೂಲವಾದುವು. ಕೃಷ್ಣ

ಭಟ್ಟರೇ ವಿಷ ಕುಡಿಸಿದರೆನ್ನುವುದಕ್ಕೆ ರುಜುವಾತಿಲ್ಲವಾದುದರಿಂದಲೂ ಸತ್ತ ಕಮಲೆಯ ವಕ್ಷದಲ್ಲಿ ಸಾಧಿಸುವ ಜನವಿಲ್ಲವಾದುದರಿಂದಲೂ ಕೃಷ್ಣ ಭಟ್ಟರ ಮೇಲೆ ಬಂದ ಫಿರ್ಯಾದು ರದ್ದಾಯಿತು.

ಕುಂಞರಾಮನೂ ಕೃಷ್ಣ ಭಟ್ಟರೂ ಪ್ರಯಾಣಿಕರ ವಿಷಯವಾಗಿ ನಿರ್ಲಕ್ಷ್ಯವಾಗಿ ವರ್ತಿಸುತ್ತಿದ್ದುದರಿಂದ ಹೆಚ್ಚಿನ ಜನರು ಇವರನ್ನು ವಿರೋಧಿಸುತ್ತಿದ್ದರು. ಬಸ್ಸಿನ ಕಂಪೆನಿಗೆ ಮೋಸವೆಸಗುತ್ತಿರುವುದನ್ನು ಇವರ ಅನಾಚಾರವನ್ನೂ ಒಟ್ಟಿಗಿದ್ದ ಹಲವರು ಕಂಪೆನಿಯ ಒಡೆಯರಿಗೆ ತಿಳಿಸಿದರು. ಮ್ಯಾಲಕರು ಚಕ್ಕರರನ್ನು ಗುಟ್ಟಿನಲ್ಲಿ ಕಳುಹಿ ಇವರ ಮೋಸವನ್ನು ಬಯಲಿಗೆಳೆದರು. ಇಂತಹ ಅವಿಶ್ವಾಸಿಗಳನ್ನು ಕೆಲಸಕ್ಕಿಟ್ಟುಕೊಂಡಲ್ಲಿ ಕಂಪೆನಿಯೇ ಲೋನಾಗಬಹುದೆಂದು ಇಬ್ಬರನ್ನೂ ಕೆಲಸದಿಂದ ತೆಗೆದು ಹಾಕಿದರು. ಕುಂಞರಾಮ "ಅಪ್ಪ ಮಾಡಿಟ್ಟುದು ನನಗೇನೂ ಇಲ್ಲ. ಆದರೆ ಕೈಕಾಲು ಮುಂಡೆಗಳು ಸರಿಯಾಗಿವೆ, ಕಂಪೆನಿಯ ಕೆಲಸವಿಲ್ಲವಾದರೆ ಇನ್ನೊಂದನ್ನು ನೋಡಿಕೊಳ್ಳುವೆ" ಎಂದನು. ಕೃಷ್ಣ ಭಟ್ಟರಿಗಾದರೋ ಹಾಗಲ್ಲ. ಮನೆಯವರಿಗೆ ತಿಳಿಸಿ ಒಪ್ಪಿಗೆ ಪಡೆಯದೆ ಬೇರೆ ಉದ್ಯೋಗ ಹಿಡಿಯುವುದು ಅಸಾಧ್ಯ. ಬಂಧುಬಳಗದ ಮಾತು ಮೀರಿ ಸ್ವಚ್ಛಂದ ತಿರುಗಾಡುವಷ್ಟರ ಮಟ್ಟಿನ ಚೈತನ್ಯ ಅವರಿಗಿರಲಿಲ್ಲ. ಹಾಗಾಗಿ ನಿರ್ವಾಹವಿಲ್ಲದೆ ಮನೆಯಲ್ಲಿ ನೆಲೆಯೂರಬೇಕಾಯಿತು

## ಸುಳಿ ೪

ಬಿಸಿಲು ಮಳೆಯೆನ್ನದೆ ಗದ್ದೆ ಮತ್ತು ತೋಟಗಳಲ್ಲಿ ಮೈಮುರಿದು ದುಡಿಯಲು ಕೃಷ್ಣ ಭಟ್ಟರಿಗರಿಯದು; ಮನವೊಪ್ಪದು. ತಂದೆತಾಯಿ ತಮ್ಮ ಮತ್ತು ತನ್ನ ಸಹಧರ್ಮಿಣಿ ಹೊಲದಲ್ಲಿ ದುಡಿಯುತ್ತಿರುವಾಗ ತಾನು ಮಾತ್ರ ಸುಮ್ಮಗೆ ಕುಳಿತಿರಲೂ ಆಗುವುದಿಲ್ಲ. ದುಡಿಯದಿದ್ದರೆ ವಾಸುದೇವ ಭಟ್ಟರು ಬಿಡುವಂತೆಯೂ ಇರಲಿಲ್ಲ. "ನಿನಗಾಗಿ ಹಲವಾರು ಸಾವಿರ ರೂಪಾಯಿಗಳನ್ನು ಹಾಳು ಮಾಡಿದೆ. ಇನ್ನೂ ಬಸವನಂತೆ ತಿರುಗಾಡುವೆಯಾ? ಒಂದಿಷ್ಟೂ ನಾಚಿಕೆಯಾಗುವುದಿಲ್ಲವೇ?

ಬಾ' ನಮ್ಮಂತೆಯೇ ದುಡಿ ಎಂದು ವಾಸುದೇವ ಭಟ್ಟರು ಕರ್ಣ ಕರ್ಕಶವಾಗಿ ನುಡಿಯುತ್ತಿದ್ದರು. ಆದ್ದರಿಂದ ಸ್ವಲ್ಪ ಸ್ವಲ್ಪ ನಿರ್ವಾಹ ವಿಲ್ಲದೆ ದುಡಿಯುತ್ತಿದ್ದರು. ಕೃಷ್ಣ ಭಟ್ಟರು ಬಹಳ ಕುತಂತ್ರಿಗಳು. ಮಾತಿನಲ್ಲಿ ಬೇಕಾದಂತೆ ನಾಲಿಗೆ ಮಗುಚುವವರು. ಒಂದು ದಿನ ದುಡಿದರೆ ಮರುದಿನ "ಮೈ ಕೈ ನೋಯುತ್ತವೆ ಅಭ್ಯಾಸವಿಲ್ಲದು ದರಿಂದ ಇಂತಾಗಿರಬಹುದು. ಎರಡು ದಿನ ತುಸು ವಿಶ್ರಾಂತಿ ಪಡೆದು ಮತ್ತೆ ಯಥಾಪ್ರಕಾರ ದುಡಿಯುವೆ"ನೆನ್ನುವರು. ಮತ್ತೊಮ್ಮೆ ಹೊಟ್ಟೆ ನೋವು, ತಲೆನೋವು, ಜ್ವರ ಹೀಗೆಲ್ಲಾ ಹಲವಾರು ನೆವವೊಡ್ಡಿ ದುಡಿತಕ್ಕೆ ತಪ್ಪಿಸಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ಬೇಜಾರವಾಗುತ್ತಿದೆ; ತುಸು ಅಡ್ಡಾಡಿ ಬರುವೆನೆಂದು ಉಡುಪು ಧರಿಸಿ ಹೊರಟವರು ಸಂಜೆ ಯಾಗದೆ ಬರುತ್ತಿರಲಿಲ್ಲ. ಒಮ್ಮೊಮ್ಮೆ ಉಸಿರೆತ್ತದೆ ಎಲ್ಲಿಗಾದರೂ ಸೀದಾ ಹೊರಟು ನಡೆದುಬಿಡುತ್ತಿದ್ದರು. ಈ ರೀತಿ ಮೈಗಳ್ಳರಂತೆ ದುಡಿಯಲು ಜಾರಿಕೊಳ್ಳುತ್ತಿರುವ ಕೃಷ್ಣ ಭಟ್ಟರನ್ನು ನೋಡಿದಾಗ ಉಳಿದವರಿಗೆ ತಡೆಯಲಾರದ ವ್ಯಥೆಯಾಗುತ್ತಿತ್ತು. "ಹೀಗೆ ಮಾಡ ಬಾರದು" ಎಂದು ವಾಸುದೇವ ಭಟ್ಟರೆಂದರೆ ಕೃಷ್ಣ ಭಟ್ಟರು ಏನಾ ದರೂ ಪ್ರತಿಯಾಗಿ ನುಡಿಯುತ್ತಿದ್ದರು. ಮೈಯಲ್ಲಿ ಸುಖವಿಲ್ಲದಿದ್ದರೆ ದುಡಿಯುವುದಾದರೂ ಹೇಗೆ? ಒಮ್ಮೊಮ್ಮೆ ಮನುಷ್ಯನಾದವನಿಗೆ ತುಸು ವಿಹಾರವೂ ಬೇಡವೇ?" ಎಂದು ಕೃಷ್ಣ ಭಟ್ಟರು ಎದುರು ಸವಾಲು ಮಾಡುತ್ತಿದ್ದರು.

"ತಾನೊಂದು ನೆನಸಿದರೆ ದೈವ ಮಗುದೊಂದು ಬಗೆಯಿತು. ಎಂಬಂತಾಯಿತಲ್ಲ. ಕೃಷ್ಣ ಭಟ್ಟರೂ ಭೂಮಿಗೆ ಭಾರ ಅನ್ನಕ್ಕೆ ದಂಡ ಎಂಬಂತಾಗುತ್ತಿರುವರಲ್ಲ. ಅವರನ್ನು ಸರಿದಾರಿಗೆ ತರಲು ಯಾವ ಉಪಾಯ ಮಾಡಲಿ" ಎಂದು ವಾಸುದೇವ ಭಟ್ಟರು ತಲೆಕೆರೆಯತೊಡ ಗಿದರು. ಕೃಷ್ಣ ಭಟ್ಟರ ಮಾವ ಶಂಭು ಭಟ್ಟರೊಂದಿಗೆ ಈ ಸಮಸ್ಯೆ ಯನ್ನು ಬಗೆಹರಿಸುವುದೆಂತೆಂದು ಅಭಿಪ್ರಾಯ ವಿನಿಮಯ ಮಾಡಿದರು. "ನಿರಂಕುಶ ವೃತ್ತಿಗಳಾಗಿ ಸ್ವೇಚ್ಛಾಚಾರಿಗಳಾದವರನ್ನು ಸರಿದಾರಿಗೆ ತರು ವುದು ಸುಲಭ ಸಾಧ್ಯವಲ್ಲ. ಹೊರೆ ಹೊರುವವರು ಇನ್ನೊಬ್ಬರಿರುವಾಗ

ಖುಶಿ ಬಂದ ಹಾಗೆ ತಿರುಗಾಡಿ ಕಾಲ ಕಳೆಯುತ್ತಾರೆ. ಕಷ್ಟನಷ್ಟಗಳ ಚಿಂತೆ ಅವರಿಗೇನು ಗೊತ್ತು? ಆದುದರಿಂದ ಯಾವುದಾದರೊಂದು ಬಗೆಯಲ್ಲಿ ಅಂತಹರ ತಲೆ ಮೇಲೆ ಭಾರ ಹೇರಬೇಕು. ಎಲ್ಲಾದ ರೊಂದು ಕಡೆ ವಾಯಿದೆ ಗೇಣಿಗೆ ಆಸ್ತಿಪಡೆದು ಅಲ್ಲಿನ ಜವಾಬ್ದಾರಿ ಯನ್ನು ಕೃಷ್ಣ ಭಟ್ಟರಿಗೊಪ್ಪಿಸಬೇಕು. ಲಾಭನಷ್ಟಗಳ ಸಂಪೂರ್ಣ ಜವಾಬ್ದಾರಿ ಅವನದಾಗಿ ಬರುವಾಗ ಸರಿದಾರಿಗೆ ಬಂದಾನು" ಎಂದು ಶಂಭುಭಟ್ಟರೂ ವಾಸುದೇವ ಭಟ್ಟರೂ ಯೋಚಿಸಿ ಮಥನ ಮಾಡಿ ನಿರ್ಣೈಸಿದರು.

ಶಂಭು ಭಟ್ಟರೂ ವಾಸುದೇವ ಭಟ್ಟರೂ ಗೇಣಿಗೆ ಆಸ್ತಿಹುಡುಕ ತೊಡಗಿದರು. "ಸ್ಥಳ ಒಳ್ಳೆಯದಾಗಬೇಕು. ನೀರು ಧಾರಾಳ ಇರ ಬೇಕು. ಆಗಮೆ ಮಾಡಿ ಉತ್ಪತ್ತಿ ಹೆಚ್ಚಿಸಲನುಕೂಲವಿರಬೇಕು. ಗೇಣಿ ಕಡಿಮೆಯದಾಗಬೇಕು ಫಲವಸ್ತು ಸಂಪೂರ್ಣ ಇರುವುದಾದರು ತ್ತಮ. ಕಡಿಮೆ ವರ್ಷ ಗೇಣಿಕೊಟ್ಟು ಸಂಸಾರವೊಂದರ ಖರ್ಚು ಹೋಗುವಂತಹುದಾಗಬೇಕು. ದುಡಿವ ಕೂಲಿಗೂ ಖರ್ಚಿಗೂ ಕೈಯಿಂದ ಹಾಕಬೇಕಾಗಿ ಬರಬಾರದಿರುವುದಾಗಬೇಕು" ಎಂದು ಅಲ್ಲಿ ಇಲ್ಲಿ ಹುಡುಕಾಡ ತೊಡಗಿದರು. ಎಲ್ಲಿಯೂ ಸರಿಗಟ್ಟಾಗಲಿಲ್ಲ. ಕಟ್ಟಕಡೆಗೆ ಬೆಳ್ಳಾರೆಯ ಸಮೀಪ ಇವರು ಯೋಚಿಸಿದಂತಹುದೇ ಸ್ಥಳ ಲಭಿಸಿತು. ಜಾಗ ಕುಂಞಂಬು ನಾಯರುಗಳದಾಗಿತ್ತು. ಅವರು ತುಸು ದೂರ ವಿದ್ದುದರಿಂದಲೂ ಮನೆಯಲ್ಲಿ ಸರಿಯಾಗಿ ಕೆಲಸ ನಿರ್ವಹಿಸುವ ಜನ ರಿಲ್ಲವಾದುದರಿಂದಲೂ ಆ ಜಾಗ ಸರಿಯಾದ ಕೃಷಿಯಿಲ್ಲದೆ ಹಡಿಲು ಬಿದ್ದಹಾಗಿತ್ತು. ಹಲವಾರು ಜನರು ಬಹುಕಡಿಮೆ ಗೇಣಿಗೆ ಆ ಸ್ಥಳ ಮಾಡಿಕೊಂಡು ಒಂದೊಂದು ವರ್ಷದ ಫಸಲನ್ನು ಮಾತ್ರ ಕೊಯಿದು ತಿಂದು ಕುಂಞಂಬು ನಾಯರುಗಳಿಗೆ ಒಂದಿಷ್ಟೂ ಗೇಣಿಕೊಡದೆ ಪರಾರಿಯಾಗಿದ್ದರು. ಅಂತಾದುದರಿಂದ ಕುಂಞಂಬು ನಾಯರುಗಳು ಹಿಡಿ ಇಲ್ಲದೇ ಆಸ್ತಿ ಗೇಣಿಗೆ ಕೊಡಲಾರೆನೆಂದು ನಿರ್ಧರಿಸಿದುದೂ ಇವರು ಬರುವುದೂ ಸರಿಹೋಯಿತು. ಸ್ಥಳ ಆಗಬಹುದೆಂದು ಶಂಭು ಭಟ್ಟರೂ ವಾಸುದೇವ ಭಟ್ಟರೂ ನಿರ್ಣೈಸಿದರು. ಒಂದು ಸಾವಿರ

ರೂಪಾಯಿ ಮುಂಗೇಣಿ ಕೊಟ್ಟು ಇಪ್ಪತ್ತೈದು ವರ್ಷಗಳ ಪಾಯಿದೆಗೆ ಆ ಸ್ಥಳವನ್ನು ವಾಸುದೇವ ಭಟ್ಟರು ಪಡಕೊಂಡರು. ಎರಡೆಕ್ರೆ ತೋಟವೂ ಐದು ಮುಡಿ ಗದ್ದೆಯೂ ಧಾರಾಳ ಕೃಷಿ ಮಾಡಬಹುದಾದ ಸ್ಥಳವೂ ಆ ಜಾಗದಲ್ಲಡಗಿದ್ದುವು.

ಗೋಳಿಕಟ್ಟೆಯ ಆಸ್ತಿಯನ್ನು ಗೇಣಿಗೆ ಪಡಕೊಂಡ ಅನಂತರ ಕೃಷ್ಣಭಟ್ಟರಿಗೆ ಅಲ್ಲಿನ ಕೆಲಸಾವಳಿಯ ಜವಾಬ್ದಾರಿಯನ್ನು ವಾಸುದೇವ ಭಟ್ಟರಿತ್ತರು. ಕೃಷ್ಣಭಟ್ಟರೂ ಲಲಿತೆಯೂ ಗೋಳಿಕಟ್ಟೆಯಲ್ಲಿ ಹೋಗಿ ನೆಲಸಿದರು. ಉತ್ಪತ್ತಿ ಹೆಚ್ಚಿಸಿ ಆದಾಯ ಪಡೆಯಬೇಕು. ಹೊಸದಾಗಿ ತಟ್ಟು ಸರಿಪಡಿಸಿ ಅಡಿಕೆ ಸಸಿ ಇಡಬೇಕು. ಇರುವ ಮರಗಳಿಗೆ ಚೆನ್ನಾಗಿ ಸೊಪ್ಪು ಗೊಬ್ಬರ ಹಾಕಬೇಕು. ಸರಿಯಾಗಿ ನೀರು ಹಾಕ ಬೇಕು. ನಿನ್ನಿಂದೊಬ್ಬನಿಂದಲೇ ಕೆಲಸ ಪೂರೈಸಲಾರದು. ತುಸು ಮಟ್ಟಿಗೆ ಕೂಲಿಯವರ ಸಹಕಾರದಿಂದ ಕೆಲಸ ನಿರ್ವಹಿಸಬೇಕು. ಕೂಲಿಗಳ ಬೆನ್ನುಬಿಡದೆ ಸಂಗಡ ದುಡಿಯಬೇಕು. ಎಂದು ಮೊದಲಾಗಿ ಸಂಗಡ ಬಂದ ವಾಸುದೇವ ಭಟ್ಟರು ಕೃಷ್ಣ ಭಟ್ಟರಿಗೆ ಮಾಹಿತಿಯನ್ನು ಉಪದೇಶಿಸಿದರು. "ಹೇಗೂ ಬೇರೆಕುಳಿತಲ್ಲಿ ನಿರ್ಬಂಧ ತುಸುಮಟ್ಟಿ ಗಾದರೂ ಸಡಿಲವಾಗುವುದು. ಮೆಲ್ಲಮೆಲ್ಲಗೆ ಇಲ್ಲಿನ ಸರ್ವಾಧಿಕಾರ ವಹಿಸುವೆನು. ಕಾಲಬಂದಂತೆ ಕೋಲ ಕಟ್ಟಬೇಕು. ಈಗವರು ನುಡಿದುದಕ್ಕೆಲ್ಲಾ ಸೈಗುಟ್ಟಿ ಕೆಲಸ ಸಾಧಿಸಬೇಕು. ಕಾರ್ಯಸಾಧಿಸಿ ಆರಾಮವಾಗಿ ದಿನಗಳೆವೆ"ನೆಂದು ಕೃಷ್ಣಭಟ್ಟರು ಮನದಲ್ಲಿ ಯೋಚಿಸಿ ದರು. ಜನಕರಾದ ವಾಸುದೇವ ಭಟ್ಟರಂದುದಕ್ಕೆಲ್ಲಾ ಸೈಗುಟ್ಟಿದರು. ಉತ್ಸಾಹಪೂರ್ವಕ ದುಡಿದು ನಿಮ್ಮೆಣಿಕೆಗಿಂತ ಹೆಚ್ಚಾಗಿ ಕೆಲಸ ಮಾಡುವೆ ನೆಂದು ಕೃಷ್ಣಭಟ್ಟರು ಭರವಸೆಯ ಮಾತುಗಳನ್ನಾಡಿದರು.

ಗೋಳಿಕಟ್ಟೆಯಲ್ಲಿ ವಾಸಮಾಡತೊಡಗಿದ ಕೃಷ್ಣಭಟ್ಟರು ಮೆಲ್ಲ ಮೆಲ್ಲಗೆ ಸರ್ವತಂತ್ರ ಸ್ವತಂತ್ರರಾಗತೊಡಗಿದರು. ವಾಸುದೇವ ಭಟ್ಟರು ವಾರಕ್ಕೊಮ್ಮೆ ಪಕ್ಷಕ್ಕೊಮ್ಮೆ ತಿಂಗಳಿಗೊಮ್ಮೆ ಬಂದು ಹೊಸ ಆಸ್ತಿಯಲ್ಲೆಷ್ಟು ಮಟ್ಟಿಗೆ ಕೆಲಸಸಾಗಿದೆಯೆಂದು ನೋಡುತ್ತಿದ್ದರು.

ಬಂದಾಗ ಬಂದಾಗ "ಹಾಗೆ ಮಾಡಬೇಕು. ಹೀಗೆ ಮಾಡಬೇಕು" ಎಂದು ಅನುಭವ ಕೊಡುತ್ತಿದ್ದರು. ಕೃಷ್ಣಭಟ್ಟರು ವಿನೀತರಾಗಿ ಎಲ್ಲವನ್ನೂ ಕೇಳಿಕೊಂಡು ಹಾಗೆಯೇ ಮಾಡುವೆನೆನ್ನುತ್ತಿದ್ದರು. ಬರುವಾಗ ಬರುವಾಗ ವಾಸುದೇವ ಭಟ್ಟರು ಕೆಲಸಾವಳಿಯ ಖರ್ಚಿಗೂ ಮನೆಯ ಖರ್ಚಿಗೂ ಹಣತರುತ್ತಿದ್ದರು. ಅದನ್ನು ಇಂತಿಷ್ಟು ದಿನಗಳಿಗೆ ಇಂತಿಂತಹ ಏರ್ಪಾಡುಗಳಿಗೆ ಎಂದು ಹೇಳಿ ಬೋಧಿಸಿ ಕೃಷ್ಣಭಟ್ಟರ ಕೈಯಲ್ಲಿ ಕೊಡುತ್ತಿದ್ದರು. ಕೃಷ್ಣಭಟ್ಟರು ತಂದೆಯೆದುರು ಬಹು ಶ್ರದ್ಧೆತಕ್ಕೊಂಡು ಕೆಲಸ ನಿರ್ವಹಿಸುವವರಂತೆ ನಟಿಸುತ್ತಿದ್ದರು. ವಾಸುದೇವ ಭಟ್ಟರು ಬೆನ್ನುತೋರಿಸಿದ ಕೂಡಲೇ ತನ್ನ ಸ್ವಚ್ಛಂದ ವೃತ್ತಿಗೆ ತಲೆಬಾಗುತ್ತಿದ್ದರು. ಒಂದು ಚಿಕ್ಕ ಹುಲ್ಲುಕಡ್ಡಿಯನ್ನೆತ್ತಿ ಅತ್ತ ಇಡಬೇಕಾದರೂ ಕೂಲಿಯಾಳುಗಳನ್ನು ಕರೆಯುತಿದ್ದರು. ಸಂಪೂರ್ಣ ಕೆಲಸಗಳನ್ನೂ ಕೂಲಿಕೊಟ್ಟೇ ಮಾಡಿಸಿ ತಾವು ತಮ್ಮಷ್ಟಕ್ಕೇ ಎಲ್ಲಾದರೂ ಅಲೆದಾಡುತ್ತಿದ್ದರು. ವಾಸುದೇವ ಭಟ್ಟರು ಬಂದಾಗ ಹಾಗಾಯಿತು ಹೀಗಾಯಿತು ಎಂದು ಸುಳ್ಳು ಹೇಳಿ ವಾಸುದೇವ ಭಟ್ಟರನ್ನೊಪ್ಪುವಂತೆ ಮಾಡಿ ತಮ್ಮ ಕುಶಾಲುಗಾರಿಕೆಗೂ ಹಣ ದಕ್ಕಿಸಿಕೊಳ್ಳತೊಡಗಿದರು. ಗೋಳಿಕಟ್ಟೆಯಿಂದೊಂದು ಮೈಲಂತರದಲ್ಲಿ ಪೇಟೆಯೂ ಇತ್ತು. ಅಲ್ಲಿ ನಾಗಿ ತಮ್ಮಂತೆಯೇ ಇರುವವರ ಪರಿಚಯ ಮಾಡಿಕೊಂಡರು. ಮೆಲ್ಲಮೆಲ್ಲಗೆ ಹೆಚ್ಚುಕಾಲವನ್ನೂ ಪೇಟೆಯಲ್ಲೇ ಕಳೆಯುವವರೂ ಆದರು.

ಹೀಗೆ ದಿನಗಳ ಮೇಲೆ ದಿನಗಳುರುಳುತ್ತಿರಲು ಮೂರು ತಿಂಗಳುಗಳೊಂದರ ಮೇಲೊಂದಾಗಿ ದಾಟಿದುವು. ಒಂದು ದಿನ ವಾಸುದೇವ ಭಟ್ಟರು ಹಲಸಿನಡ್ಕದ ತಮ್ಮ ಜಾಗದಲ್ಲಿರುವ ದೊಡ್ಡದೊಂದು ಮರವನ್ನು ಸೊಪ್ಪು ಕಡಿಯಲಾಗಿ ಮೇಲೇರ ಬಯಸಿದರು. ರೆಂಬೆಯೊಂದೂ ಕೆಳಗಿಲ್ಲದೆ ದೈತ್ಯಾಕಾರವಾಗಿ ಬೆಳೆದಿದ್ದ ಆ ಮರದಲ್ಲಿ ಹಸುರೆಲೆಗಳು ಹಸನಾಗಿ ಕಂಗೊಳಿಸುತ್ತಿದ್ದುವು. ಆ ಸೊಪ್ಪು ಹೇಗಾದರೂ ಕಡಿದು ಹಾಕಿದರೆ ನೂರಾರು ಮರಗಳ ಬುಡಕ್ಕೆ ಸಾಕಾಗಬಹುದು. ಮರವೇರಲು ಬಹುಪ್ರಯಾಸ ಪಡಬೇಕಾದರೂ ಸೊಪ್ಪು ಕಡಿಯದೆ ಬಿಡಲು ವಾಸುದೇವ ಭಟ್ಟರ ಮನವೊಪ್ಪಲಿಲ್ಲ. ಹೇಗೂ ಪ್ರಯಾಸಪಟ್ಟು

ಮರವೇರಿದರು. ಸೊಪ್ಪನ್ನೆಲ್ಲಾ ಕಡಿದು ಕೆಳಗುರುಳಿಸಿದರು. ಅನಂತರ ಬಹು ಜಾಗ್ರತೆಯಲ್ಲಿ ಕೆಳಗಿಳಿಯುತ್ತಿರುವಾಗ ಕೈಕಾಲು ಜಾರಿ ಧೊಪ್ಪನೆ ಬಿದ್ದುಬಿಟ್ಟರು. ಬಿದ್ದ ಸದ್ದುಕೇಳಿ ಸನಿಯದಲ್ಲೇ ದುಡಿಯುತ್ತಿದ್ದ ಪದ್ಮನಾಭ ಭಟ್ಟರೂ ಕೂಲಿಯಾಳುಗಳೂ ಓಡಿ ಬಂದರು. ಬಂದು ನೋಡುವಾಗ ವಾಸುದೇವ ಭಟ್ಟರು ಪ್ರಜ್ಞೆತಪ್ಪಿ ಬಿದ್ದಿದ್ದರು. ಮುಖಕ್ಕೆ ನೀರು ತಂದು ಚಿಮುಕಿಸಿ ಗಾಳಿ ಹಾಕಿ ಉಪಚರಿಸಿದಾಗ ವಾಸುದೇವ ಭಟ್ಟರು ಮೆಲ್ಲನೆ ಕಣ್ಣುತೆರೆದರು. "ನೀರು" ಎಂದರು. ಸೀಯಾಳ ವೆರಡು ಕೊಯಿದು ತಂದು ಕುಡಿಸಿದರು. ವಾಸುದೇವ ಭಟ್ಟರ ಮೈ ಜಜ್ಜಿದಂತಾಗಿ ಬಾತಿತು. ಕಾಲೂರಲಾಗುತ್ತಿರಲಿಲ್ಲ. ಪದ್ಮನಾಭ ಭಟ್ಟರೂ ಕೆಲಸದಾಳುಗಳು ವಾಸುದೇವ ಭಟ್ಟರನ್ನು ಹೊತ್ತುಕೊಂಡು ಬಂದು ಮನೆಯಲ್ಲಿ ಹಾಸಿಗೆಯಲ್ಲಿ ಮಲಗಿಸಿದರು. ಮನೆಯವರೆಲ್ಲಾ ವ್ಯಥೆ ಪಟ್ಟರು.

ವಾಸುದೇವ ಭಟ್ಟರು ಬಿದ್ದ ಸುದ್ದಿ ಕೇಳಿ ನೆರೆಯವರೆಲ್ಲ ಓಡಿ ಬಂದರು. ಬಂದು ನೋಡಿ ಮರುಕಪಟ್ಟು "ಅಯ್ಯೋ! ಪಾಪ ಹೀಗಾಯಿತಲ್ಲಾ" ಎಂದು ಸಹಾನುಭೂತಿ ವ್ಯಕ್ತಪಡಿಸಿದರು. ಬಿದ್ದು ಮೈ ಪೆಟ್ಟಾಗಿ ನೋಯುತ್ತಿದ್ದುದರಿಂದ ನೋವಿಗೆ ಬೇಕಾದ ಎಣ್ಣೆಯನ್ನು ಸವರಿ ಶಾಕ ಕೊಟ್ಟರು. "ಎಡದ ಕಾಲೊಂದು ಮುರಿದಿದೆ ಎಂದೆಲ್ಲರೂ ಅಭಿಪ್ರಾಯಪಟ್ಟರು. ವಾಸುದೇವ ಭಟ್ಟರು ಅವಘಡಕ್ಕೆ ತುತ್ತಾಗಿ ಪೆಟ್ಟಾಗಿ ಬಳಲಿರುವರು ಎಂಬ ಸುದ್ದಿಯನ್ನು ಪದ್ಮನಾಭ ಭಟ್ಟರು ಅಣ್ಣ ಕೃಷ್ಣ ಭಟ್ಟರಿಗೂ ತಂಗಿ ಸಾವಿತ್ರಿಗೂ ಜನರ ಮುಖಾಂತರ ಹೇಳಿ ಕಳುಹಿದರು. "ವಾಸುದೇವ ಭಟ್ಟರ ಕಾಲು ಸರಿಪಡಿಸಲು ಯೋಗ್ಯ ಯೋಗ್ಯಜನರನ್ನು ಕರತರುವೆವು. ಗಾಬರಿಯೇನೂ ಇಲ್ಲ. ಸಂಗತಿ ಮಾತ್ರ ಹೀಗೆಲ್ಲ ನಡೆಯಿತು. ಒಟ್ಟಾರೆ ಗ್ರಹಚಾರ" ಎಂದು ಅಣ್ಣ ಅನಂತ ಭಟ್ಟರಿಗೆ ಪತ್ರ ಬರೆದರು.

ಮುರಿದ ಕೈಕಾಲು ಮೊದಲಾದ ಭಾಗಗಳನ್ನು ಸರಿಪಡಿಸುವುದರಲ್ಲಿ ನಾಗನಮೂಲೆ ಚಂಗರ ಪಾಟಾಳಿ ಹೆಸರು ಹೋದವನು. ಅವನು

ಹಲವಾರು ಜನರ ಮುರಿದ ದೇಹದ ಭಾಗಗಳನ್ನು ಕಟ್ಟಿ ಸರಿಪಡಿಸಿದ ಉದಾಹರಣೆಗಳು ಹೇರಾಳ ಇವೆ. ಆದ್ದರಿಂದ ಅಲ್ಲಿಗೆ ತೆರಳಿ ಅವನನ್ನು ಕರೆಕೊಂಡು ಬರುವುದೊಳ್ಳಿತೆಂದು ಪದ್ಮನಾಭ ಭಟ್ಟರು ನಿಶ್ಚಯಿಸಿದರು. ತಂದೆ ವಾಸುದೇವ ಭಟ್ಟರ ಒಪ್ಪಿಗೆ ಪಡೆದು ನಾಗನಮೂಲೆಯಿಂದ ಕೂಡಲೇ ಚಂಗರ ಪಾಟಾಳಿಯನ್ನು ಕರೆಕೊಂಡು ಬಂದರು. ಚಂಗರ ಪಾಟಾಳಿ ವಾಸುದೇವ ಭಟ್ಟರನ್ನು ಪರೀಕ್ಷಿಸಿ ನೋಡಿದನು. "ಕಾಲು ಮುರಿದಿದೆ. ಸರಿಯಾಗಿ ಉಜ್ಜಿ ತಿಕ್ಕಿ ಕಟ್ಟಿದರೆ ಏನೂ ತೊಂದರೆಯಾಗದು ಕಾಲು ನೇರವಾಗುವುದರಲ್ಲಿ ಸಂದೇಹವಿಲ್ಲ. ಈಗ ಒಂದು ತಿಂಗಳ ವರೆಗೆ ಎರಡು ದಿನಗಳಿಗೊಮ್ಮೆ ಪಡಿಕಟ್ಟಿ ಕಟ್ಟು ಹಾಕಬೇಕಾದ ರೀತಿಯಲ್ಲಿ ಉಪಚರಿಸುವೆ. ತದನಂತರ ವಾರಕ್ಕೊಮ್ಮೆ ಬಂದು ಐದಾರು ಸಲ ಉಜ್ಜಿ ಕಟ್ಟಿದರೆ ಕಾಲು ಸರಿಯಾಗುವುದು. ಆದರೂ ನೋವು ಹೋಗಬೇಕಾದರೆ ಆರು ತಿಂಗಳುಗಳ ಕಾಲ ಬೇಕೇಬೇಕು. ಮದ್ದು ಹಚ್ಚಿಯೂ ಎಣ್ಣೆ ಹಚ್ಚಿಯೂ ಮೆಲ್ಲಗೆ ಮಾಂಸ ತುಂಬಿ ನೋವು ಹೋಗಬೇಕು. ಮುರಿದ ಎಲುಬು ಕೂಡುವಷ್ಟರವರೆಗೆ ನೋವಿರಬಹುದು. ಆರು ತಿಂಗಳಲ್ಲಿ ಕಾಲು ಮೊದಲಿನಂತಾದರೂ ಒಂದು ವರ್ಷದ ಮಟ್ಟಿಗೆ ಎಲ್ಲಿಗೂ ವಿಶೇಷ ನಡೆದು ಹೋಗಬಾರದು. ಕಾಲ ಮೇಲೆ ಭಾರ ಹಾಕಿ ನಡೆದರೆ ಬಳವು ಬಿದ್ದು ಕಾಲು ಮೋಟಾಗುವುದು" ಎಂದು ಚಂಗರ ಪಾಟಾಳಿ ತಕ್ಕ ವಿವರಗಳನ್ನರುಹಿ ಎಚ್ಚರಿಸಿ ವಾಸುದೇವ ಭಟ್ಟರ ಕಾಲನ್ನು ಸರಿಪಡಿಸಲು ಪ್ರಾರಂಭಿಸಿದರು.

ಗಜಾನನ ಭಟ್ಟರು ಸಾವಿತ್ರಿ ಮೊದಲಾದ ಹತ್ತಿರದ ಬಂಧುಗಳೂ ದೂರದಿಂದ ಕೃಷ್ಣ ಭಟ್ಟರೂ ವಾಸುದೇವ ಭಟ್ಟರನ್ನು ನೋಡಲಾಗಿ ಬಂದರು. ಸಾವಿತ್ರಿ ಗಜಾನನ ಭಟ್ಟರು ಮರುಕ ತೋರಿ ನಡೆಯುತ್ತಿರುವ ಚಂಗರ ಪಾಟಾಳಿಯ ಆರೈಕೆಯೇ ಸಾಕಾಗಬಹುದೆಂದು ಅಭಿಪ್ರಾಯಪಟ್ಟರು. ಆದರೆ ಕೃಷ್ಣ ಭಟ್ಟರಿಗೆ ಚಂಗರ ಪಾಟಾಳಿಯು ಕಾಲು ಸರಿಪಡಿಸಿಯಾನೆಂಬ ವಿಶ್ವಾಸ ಬರಲಿಲ್ಲ. "ಈ ಹಳ್ಳಿಯ ಕುರುಬರಿಗೆ ಏನು ಗೊತ್ತು. ಮೇಲಿಂದ ಮೇಲೆ ಕೈಯಲ್ಲಿ ಮುಟ್ಟಿ

ಕಣ್ಣಲ್ಲಿ ನೋಡಿದರೆ ಚರ್ಮದೊಳಗಡೆ ಏನಾಗಿದೆಯೆಂದು ತಿಳಿಯುವು ದಾದರೂ ಹೇಗೆ? ಸುಮ್ಮನುವ್ಮಸೆ ಡಂಭಾಚಾರಕ್ಕೆ ಗೊತ್ತಾದಂತೆ ನಟಿಸಿ ಕಾಲು ಹಾಳು ಮಾಡುವರಲ್ಲದೆ ಪ್ರಯೋಜನವೇನೂ ಸಿಗದು. ಹೆಸರಾಂತ ನುರಿತ ಡಾಕ್ಟರುಗಳ ಹತ್ತಿರ ಅಂದರೆ ಸರ್ಜನುಗಳ ಹತ್ತಿರ ಚಿಕಿತ್ಸೆಗಾಗಿ ಸಾಗಬೇಕು. "ಎಕ್ಸ್‌ರೇ" ಫೋಟೋ ತೆಗೆದು ಏನಾ ಗಿದೆಯೆಂದರಿಯಬೇಕು. ಹಳ್ಳಿಯ ಮದ್ದಿಸಿಂದೇನೂ ಫಲಸಿಗದು. ನೀವೊಪ್ಪಿದರೆ ಪೇಟೆಗೆ ಕರಕೊಂಡು ಹೋಗಿ ಸರ್ಜನರಿಗೆ ತೋರಿಸಿ ಗುಣಪಡಿಸುವೆ ನಾನು" ಎಂದು ಕೃಷ್ಣ ಭಟ್ಟರು ತಂದೆಯೊಡನು ನುಡಿದರು.

ನಿನಗೆ ಹಳ್ಳಿಗರ ವಿಶ್ವಾಸವಿಲ್ಲ. ನನಗೆ ಪೇಟೆಯ ಡಾಕ್ಟರು ಸರ್ಜನುಗಳೆಂದರೆ ಆಗದು. ಆ ಸರ್ಜನುಗಳಿಗೂ ಡಾಕ್ಟರರಿಗೂ ಓಪ ರೇಶನ್ ಮಾಡಲಿಕ್ಕೆ ಮಾತ್ರ ತಿಳಿದೀತಲ್ಲದೆ ಇದ್ದಕ್ಕಿದ್ದ ಹಾಗೆ ಸರಿಪಡಿ ಲರಿಯದು. ಅಂಬಿಕಾನ ಗಣೇಶ ಭಟ್ಟರ ಕೈ ಮುರಿದದ್ದನ್ನು ಓಪ ರೇಶನ್ ಮಾಡಿ ಸರ್ಜನರೇನು ಮಾಡಿದರು? ಈಗಲೂ ಕೈಯೊಂದು ಮೋಟು. ಮಂಜಿಮೂಲೆ ವಿಷ್ಣು ಭಟ್ಟರ ಕಾಲ ಮೊಣಗಂಟಿನ ಕೀಲು ತಪ್ಪಿದುದನ್ನು ಸರ್ಜನರು ಸರಿಪಡಿಸಲಾರದೆ ಓಪರೇಷನ್ ಮಾಡಬಯಸಿದಾಗ ಅವರು ಕಾಲು ಹಾಳಾದೀತೆಂದು ಹೆದರಿ ಸರ್ಜನ ರನ್ನು ಬಿಟ್ಟುಬಿಟ್ಟರು. ಆ ಮೇಲೆ ಕೀಲು ಸರಿಪಡಿಸಿದಾತ ಈ ಚಂಗರ ಪಾಟಾಳಿಯಲ್ಲವೇ? ಅವರ ಕಾಲೀಗ ಮೊದಲಿನಂತಿಲ್ಲವೇ? ಸರ್ಜನರ ಸುದ್ದಿ ನನ್ನೆದುರು ಎತ್ತದಿರು" ಎಂದು ವಾಸುದೇವ ಭಟ್ಟರು ರೇಗಿ ನುಡಿದರು. ಕೃಷ್ಣ ಭಟ್ಟರಿಗೆ ಮುಖಭಂಗವಾಯಿತು. ಕಾಲು ಮೋಟಾದರೂ ಸರಿಯಾದರೂ ನಿಮ್ಮದು. ತನ್ನ ತಂದೆಯವರದು ಎಂದು ಸೂಚನೆ ಮಾತ್ರ ಕೊಟ್ಟೆನು. ನಿಮ್ಮಿಷ್ಟದಂತೆಯೇ ಆಗಲಿ ಎಂದು ಕೃಷ್ಣ ಭಟ್ಟರು ವ್ಯಂಗ್ಯವಾಗಿ ನುಡಿದರು. ವಾಸುದೇವ ಭಟ್ಟರ ಕಾಲುಜ್ಜಿ ಸರಿಪಡಿಸುವ ಕೆಲಸ ಚಂಗರ ಪಾಟಾಳಿಯದೇ ಆಯಿತು.

"ತಂದೆ ವಾಸುದೇವ ಭಟ್ಟರು ಕಾಲು ಮುರಿದುದರಿಂದ ಮಲಗಿ ದಲ್ಲೇ ಆದರು. ಇನ್ನು ಮೇಲೆ ಕಾರ್ಯಭಾರವನ್ನು ವಹಿಸುವವನು

ುರಬೇಕು. ಅಡಿಕೆಯೇ ಮೊದಲಾದ ಸಾಮಾನುಗಳನ್ನು ಪೇಟೆ
ಗೆ ಸಾಗಿಸಿ ಹಣ ತರುವ ವಹಿವಾಟು ಅಲ್ಲದೆ ಬಾಕಿಯುಳಿದ
ಾನ ವಹಿವಾಟುಗಳನ್ನೂ ನಾನೇ ನಿರ್ವಹಿಸಬೇಕೆಂದು ಪಿತೃಗಳೂ
ಗಳೂ ಹೇಳದಿರರು. ದೈವಯೋಗದಿಂದ ಅಲ್ಲಿನ ಮತ್ತು ಇಲ್ಲಿನ
ೂರ್ಣ ಕಾರ್ಯಭಾರ ನನ್ನದಾಗುವ ಕಾಲಬಂತು.” ಎಂದು
ಭಟ್ಟರು ಮನದಲ್ಲೇ ಮುಂದಿಗೆ ತಿನ್ನುತ್ತಿದ್ದರು. ಹಾಗಾಗಿ ಕಾರ್ಯ
ಳ ವಿಷಯವಾಗಿಯೂ ವಾಸುದೇವ ಭಟ್ಟರ ವಿಷಯದಲ್ಲಿ ತಕ್ಕೊಳ್ಳ
ದ ಜಾಗರೂಕತೆಯು ಪರವಾಗಿಯೂ ಉಳಿದವರಿಗೆ ಉದ್ದುದ್ದದ
ಾಸ ಕೊಡತೊಡಗಿದರು. ತಂದೆಯವರ ಮನವೊಚ್ಚಿಸಲು
ಗೂ ನಾಲ್ಕೈದು ಧೈರ್ಯದ ಮಾತುಗಳನ್ನಾಡಿದರು. ಆದರೂ
ೂಬ್ಬರೂ ಕೃಷ್ಣಭಟ್ಟರು ವಾಸುದೇವ ಭಟ್ಟರು ಆರೋಗ್ಯ
ುವವರೆಗೆ ಕಾರ್ಯಭಾರ ವಹಿಸಬೇಕೆನ್ನದಿರುವುದು ಬೇಸರದ
ಾಯಿತು. “ಮಾತನಾಡದೆ ಕುಳಿತಲ್ಲಿ ತಮ್ಮ ಪದ್ಮನಾಭ
ು ಕಾರ್ಯಗಳನ್ನೂ ಪೂರೈಸುವ ಹೊಣೆಗಾರಿಕೆಯನ್ನು ಪಡೆಯ
ರು. ಅಂತಾದರೆ ಕೆಲಸ ಕೆಟ್ಟಿತು. ಎಚ್ಚರಿಸಿ, ಹೊಣೆಗಾರಿಕೆ
ಾಗಿಸಿಕೊಳ್ಳುವೆನೆ”ಂದು ಮನದಲ್ಲಿ ಬಗೆದರು. ತಂದೆಯ ಬಳಿಗೆ
ು. “ಅಪ್ಪಾ! ನಾನಿನ್ನು ಗೋಳಿಕಟ್ಟೆಯ ಬಳಿಗೆ ಹೊರಡುವೆನು.
ು ಬಂದ ಮಕ್ಕಳು ನಾವಿರಲು ನೀವು ಯಾವ ಬಗೆಯಲ್ಲೂ
ುಗೆ ಚಿಂತೆ ಹತ್ತಿಸಿಕೊಳ್ಳಬೇಕಾಗಿಲ್ಲ. ಕಾಲು ಸಂಪೂರ್ಣ
ಾಗುವವರೆಗೆ ನಿರ್ಲಿಪ್ತರಾಗಿರಿ. ಇಲ್ಲಿನ ಅಡಿಕೆ ಮೊದಲಾದ
ಾನುಗಳನ್ನೂ ಅಲ್ಲಿನ ಸಾಮಾನುಗಳನ್ನೂ ಭಂಡಸಾಲೆಗೆ ಸಾಗಿಸಿ
ಪಡೆದು ಸರಿಯಾಗಿ ವಿನಿಯೋಗಿಸುವ ಹೊಣೆ ನಿಮಗೆ ಸಾಧ್ಯ
ುದರಿಂದ ನಾನೆಸಗುವೆ. ಯಾವ ಕೆಲಸ ಬೇಕಾದರೂ ನಾನು
ಲು ತಯಾರಾಗಿರುವೆನು. ನಿಮ್ಮ ಮನವೊಚ್ಚುವಂತೆ ನೀವೆಂದಂತೆ
ಳ್ಳದಿದ್ದರೆ ನಾವು ಹುಟ್ಟಿ ಫಲವೇನು ?” ಎಂದು ಚಿಕ್ಕದಾಗಿ
ಅಭಿಪ್ರಾಯವನ್ನು ಸ್ಪಷ್ಟೀಕರಿಸಿದರು.

"ನಿನಗೆ ಗೋಳಿಕಟ್ಟೆಯಲ್ಲಿ ಕೆಲಸಾವಳಿ ನಿರ್ವಹಿಸುವ ಕೆಲಸವೇ ಬೇಕಾದಷ್ಟಿದೆ. ಅದನ್ನು ಸರಿಯಾಗಿ ಮಾಡು. ಇಲ್ಲಿನ ಸಾಮಾನು ಗಳನ್ನು ನನ್ನ ಹೆಸರಲ್ಲಿ ಕಾಗದ ಕೊಟ್ಟು ತಮ್ಮನ ಮೂಲಕ ಭಂಡ ಸಾಲೆಗೆ ಸಾಗಿಸುವೆ. ಅಲ್ಲಿನ ಸಾಮಾನುಗಳನ್ನೆಲ್ಲಾ ಹೇಗೆ ಹೇಗೆ ಮಾಡ ಬೇಕೆಂಬುದಕ್ಕೆ ತಿಳಿಸುವೆ. ನಾನಂದ ಹಾಗೆ ಸುಪುತ್ರರಾದ ನೀವು ನಡ ಕೊಂಡಲ್ಲಿ ನನಗೆಲ್ಲಿಯ ಚಿಂತೆ. ಗ್ರಹಚಾರ ನಿವೃತ್ತಿಯಾಗುವ ವರೆಗೆ ಕುಳಿತಲ್ಲೇ ಆದರೂ ಮತ್ತೆದ್ದು ಬರುವೆನೆಂಬ ಆಸೆ ಇದೆಯಲ್ಲ. ಆಗಲಿ, ಕೆಲಸ್ವೊಂದು ಸಮಯದ ಮಟ್ಟಿಗೆ ಸ್ವಲ್ಪ ಕಷ್ಟವಾಗಬಹುದು. ಚಿಂತೆ ಯಿಲ್ಲ" ಎಂದು ವಾಸುದೇವ ಭಟ್ಟರೆಂದಾಗ ಕೃಷ್ಣ ಭಟ್ಟರ ಗಾಳಿಗೋಪುರ ಗಳು ಕುಸಿದು ಬಿದ್ದುವು. ಈ ತಂದೆಯವರು ಅವರಿರುವತನಕ ನನ್ನನ್ನು ನಂಬುವಂತಿಲ್ಲ. ನನ್ನ ಬಗ್ಗೆ ಅವರಿಗೊಂದು ತಾತ್ಸಾರ. ತಮ್ಮನ ಮೇಲೆ ದೊಡ್ಡ ಅಭಿಮಾನ. ಅವನೊಬ್ಬ ಭಾರೀ ಬುದ್ಧಿವಂತ. ಕುಬೇರನೆಂಬ ಭಾವನೆ, ಇರಲಿ. ಇದಕ್ಕೆಲ್ಲಾ ಸರಿಯಾದ ಮದ್ದರೆ ಯುವೆ" ಎಂದು ಮನದಲ್ಲಿ ಬಗೆದರು. "ಆಯಿತು ಹೋಗಿಬರುವೆ" ನೆಂದು ಹೇಳಿ ಗೋಳಿಕಟ್ಟೆಗಭಿಮುಖವಾಗಿ ಚಿತ್ತೈಸಿದರು.

ಗೋಳಿಕಟ್ಟೆಗೆ ಬಂದ ಕೃಷ್ಣ ಭಟ್ಟರಿಗೆ ತಂದೆ ವಾಸುದೇವ ಭಟ್ಟರು ಬಿದ್ದು ಕುಳಿತಲ್ಲೇ ಆದರೂ ಕಾರ್ಯಭಾರ ತನಗೆ ಸಿಗದಾಯಿ ತಲ್ಲ ಎಂದೆನುವ ಉದ್ರೇಕ ತಲೆಗೆಡಿಸತೊಡಗಿತು. ಹಲವಾರು ಬಗೆಯ ವಿಕಲ್ಪಗಳನ್ನು ನಾನಾ ರೀತಿಯಲ್ಲಿ ಮನದಲ್ಲಿ ತಂದುಕೊಂಡರು. "ತಂದೆ ವಾಸುದೇವ ಭಟ್ಟರಿಗೆ ನನ್ನಲ್ಲಿ ಎಳ್ಳಷ್ಟೂ ಪ್ರೇಮವಿಲ್ಲ, ನಂಬಿಗೆ ಯಿಲ್ಲ. ಆದುದರಿಂದಲೇ ನನ್ನನ್ನು ದೂರಮಾಡಿ ಇಲ್ಲಿರಿಸಿ ದರು. ಕಾರ್ಯಭಾರಕೊಡದಾದರು. ಅವರಿಗೆ ಪದ್ಮನಾಭನ ಮೇಲೆ ಅಗಾಧಪ್ರೇಮ. ಆದ್ದರಿಂದಲೇ ಅವನನ್ನು ಸನಿಯದಲ್ಲಿರಿಸಿಕೊಂಡಿ ದ್ದಾರೆ. ಕಾರ್ಯಭಾರ ಕೊಡುತ್ತಿದ್ದಾರೆ. ಇಲ್ಲಾದರೂ ದೂರದಲ್ಲಿ ಸುಖವಾಗಿ ಸ್ವತಂತ್ರ ವೃತ್ತಿಯಿಂದ ಬಾಳುವ ಎಂದರೆ ಇಲ್ಲೂ ಅವರ ಹಿಡಿತ ಬಿಗಿಯಾಗಿಯೇ ಇದೆ. ಸಾಮಾನು ಸಂಗ್ರಹಿಸಿ ದಾಸ್ತಾನಿಡ ಬೇಕು, ಏನು ಮಾಡಬೇಕೆಂಬುದನ್ನು ತಿಳಿಸುವೆ ಎಂದಿರುವರು. ಅಬ್ಬಾ!

ಇದನ್ನೆಲ್ಲಾ ನೋಡಿದರೆ ಗೂಢವಾಗಿ ಬೇರೇನೋ ಯೋಚನೆಯಿದೆ ಎಂಬುದು ಸುಸ್ಪಷ್ಟ. ಈಗಲೇ ತಿಳಿದು ಬಂದುದು ಒಳ್ಳೆಯದಾಯಿತು. ನಾನಿದಕ್ಕೆ ಸರಿಯಾದ ಪ್ರತಿಕ್ರಿಯೆಯೆಸಗದಿರಲಾರೆ. ಈ ಹಂಗಿನಿಂದ ಪಾರಾಗಿ ಸ್ವತಂತ್ರನಾಗಿ ಬಾಳಿ ಬದುಕುವ ಮಾರ್ಗ ಹುಡುಕುವೆ. ಆಸ್ತಿಯ ಕೆಲಸಾವಳಿಗೆಂದು ಹಣ ತರುವೆ. ಆ ಹಣವನ್ನು ಯಾವುದಾದರೊಂದು ವಿಷಯದಲ್ಲುಪಯೋಗಿಸಿ ಬೆಳೆಸಿ ಸ್ವತಂತ್ರನಾಗುವೆ. ಹಣ ಸಂಗ್ರಹಿಸಿ ದೊಡ್ಡದೊಂದು ಮೆಷಿನ್ ತೆಗೆಯುವೆ. ಆ ಮೆಷಿನಿನಿಂದ ದೊಡ್ಡದೊಂದು ಕೈಗಾರಿಕೆಯ ಉದ್ಯಮವನ್ನು ಪ್ರಾರಂಭಿಸುವೆ" ಎಂದು ಅಸಂತುಷ್ಟರಾಗಿ ಹಲವಾರು ಬಗೆಯ ಯೋಚನೆಯ ಕನಸುಗಳಲ್ಲಿ ಮುಳುಗಾಡಿದರು. ತನ್ನನ್ನು ತಾನೇ ಸಮಾಧಾನಪಡಿಸಿಕೊಂಡರು.

ಈಗ ಕೃಷ್ಣ ಭಟ್ಟರಿಗೆ ಮೇಲ್ವಿಚಾರಕರಿಲ್ಲ. ಅವರು ಮಾಡಿದ್ದೆಲ್ಲಾ ಸರಿ. ಹಣ ಬೇಕಾದಂತೆ ಮನೆಯಿಂದ ತರುತ್ತಿದ್ದರು. ಆಸ್ತಿಯಲ್ಲಿ ಏನಾದರೂ ಕೆಲಸ ಮಾಡಿಸಿದರೆ ಮಾಡಿಸಿದರು, ಇಲ್ಲವಾದರೆ ಇಲ್ಲ. ಕೂಲಿಯಾಳುಗಳನ್ನು ಕರೆದು ಆ ಕೆಲಸ ಮಾಡಿರಿ ಈ ಕೆಲಸ ಮಾಡಿರಿ ಎಂದಾಜ್ಞೆ ಕೊಡುವುದು ಮಾತ್ರವಲ್ಲದೆ ಕೆಲಸ ಹೇಗಾಗಿದೆ ಹೇಗಾಗಬೇಕೆಂಬುದನ್ನು ಕಣ್ಣೆತ್ತಿ ಸಹ ನೋಡದಾದರು. ತಂದ ಹಣ ಸಂಪೂರ್ಣ ನುಂಗಿದೆಯೆಂದು ಬೇಡ, ಕೂಲಿಗಳು ಕೆಲಸ ಸ್ವಲ್ಪ ಮಟ್ಟಿಗೆ ಮಾಡಿದರೆ ಮಾಡಲಿ ಎಂಬ ಉದ್ದೇಶ ಮಾತ್ರ ಅವರಲ್ಲಿತ್ತು. ಗೋಳಿಕಟ್ಟೆಯ ಗೇಣಿಯ ಆಸ್ತಿಯಲ್ಲಿ ನೆಲೆನಿಲ್ಲಬೇಕೆಂಬ ಯೋಚನೆ ಅವರಿಗಿಲ್ಲವಾಗಿತ್ತು. ಸುಳ್ಳು ಹೇಳಿ ಮನೆಯಿಂದ ತಂದ ಹಣವನ್ನು ತನ್ನ ಸುಖಕ್ಕಾಗಿಯೂ ತನ್ನ ಹೊಂಗನಸುಗಳು ಫಲವೀಯಲೂ ವಿನಿಯೋಗಿಸಬೇಕೆಂಬ ಇಚ್ಛೆ ಅವರಲ್ಲಿ ಬಲವಾಗಿ ಬೇರೂರತೊಡಗಿತು.

ಗೋಳಿಕಟ್ಟೆಯ ಪೇಟೆಯಲ್ಲಿ ಕೃಷ್ಣಭಟ್ಟರಂತಹ ಜನರು ಕೆಲ ಮಂದಿ ಇದ್ದರು. ಅವರ ಗೆಳೆತನ ಕೃಷ್ಣಭಟ್ಟರಿಗೆ ಗಾಢವಾಗಿ ಬೆಳೆಯಿತು. ದೊಡ್ಡದಾದ ಮೆಷಿನೊಂದನ್ನು ತೆಗೆದು ಅಕ್ಕಿ ಕುಟ್ಟುವ

ಮಿಲ್ಲೋ ಎಣ್ಣೆ ಹಿಂಡುವ ಗಾಣವೋ ಯಾವುದಾದರೊಂದನ್ನು ಬೇಕಾದ ಸಲಕರಣೆಯನ್ನು ಸಿದ್ಧಪಡಿಸಿ ಮೊತ್ತಮೊದಲು ಸ್ಥಾಪಿಸಬೇಕು. ಆದರೆ ಹಲವಾರು ಕುದುರೆಗಳ ಶಕ್ತಿಯ ಎಂಜಿನು ತೆಗೆಯಬೇಕಾದರೆ ಹಣ ತುಂಬಾಬೇಕು. ಸ್ವಲ್ಪ ಸ್ವಲ್ಪ ಸಂಗ್ರಹಿಸಿದ ಹಣಸಾಕಾಗಲಾರದು. ಆದ್ದರಿಂದ ತನ್ನಲ್ಲಿರುವ ಹಣವನ್ನು ಯಾವುದರೊಂದು ರೀತಿಯಲ್ಲಿ ತುಂಬಾ ಹಣ ಲಾಭಬರುವ ಕೆಲಸಕ್ಕುಪಯೋಗಿಸಬೇಕೆಂದು ಕೃಷ್ಣ ಭಟ್ಟರು ಯೋಚಿಸುತ್ತಿದ್ದರು. ಕಷ್ಟವಿಲ್ಲದೆ ಭಾಗ್ಯವಿದ್ದರೆ ಸ್ಪರ್ಧೆಗೂ ಜೂಜಿಗೂ ಹಣ ಸುರಿದರೆ ಸಿಕ್ಕಿದರೆ ಸಿಕ್ಕುವುವು ಹಲವಾರು ಸಾವಿರಾರು ರೂಪಾಯಿಗಳು. ಬೆಳ್ಳಾರೆಯ ಜಗಜ್ಜೀವನರಾಯರು ಕಳೆದ ತಿಂಗಳಲ್ಲಿ ವಿಕಟ ಪ್ರಪಂಚದ ಬಹುಮಾನ ಸ್ಪರ್ಧೆಯಲ್ಲಿ ಉತ್ತರ ಸರಿಯಾದುದರಿಂದ ಎರಡು ಸಾವಿರ ರೂಪಾಯಿಗಳನ್ನು ಒಮ್ಮೆಯೇ ಪಡೆದುಬಿಟ್ಟರಲ್ಲ. ಅವರಿಗೊಳ್ಳೆಯ ನಸೀಬು. ತಾನೂ ವಿಕಟಪ್ರಪಂಚ ಮೊದಲಾದ ಒಂದೆರಡು ಪತ್ರಿಕೆಯ ಸ್ಪರ್ಧೆಗಳಲ್ಲಿ ಭಾಗವಹಿಸುವೆನು. ನನ್ನಂತಹರಿಗೆ ಉತ್ತರ ಸರಿಯಾಗಿ ಬರುವಂತೆ ಸ್ಪರ್ಧೆ ಬಿಡಿಸುವುದೆಂದರೆ ಅದೊಂದು ದೊಡ್ಡ ಕೆಲಸವೇ! ಎಂದು ಕೃಷ್ಣ ಭಟ್ಟರಿಗೆ ತೋರಿತು.

ವಿಕಟಪ್ರಪಂಚ? ಸ್ಪರ್ಧಾಲೋಕವೆಂದೆನುವ ಶ್ರೇಷ್ಠ ಪತ್ರಿಕೆಗಳ ಒಗಟುಗಳನ್ನು (ಕ್ರಾಸ್‌ವರ್ಡ್) ಬಿಡಿಸಿ ಹಣ ಕಟ್ಟುವುದು; ಫಲಿತಾಂಶ ಹೊರಬೀಳುವುದನ್ನು ಇದಿರು ನೋಡುತ್ತಿರುವುದು; ಭಾಗ್ಯ ತೆರೆದೀತು; ಎಂದಾನೆಪಡುತ್ತಿರುವುದು, ಕೃಷ್ಣ ಭಟ್ಟರಿಗೆ ದಿನನಿತ್ಯದ ಕೆಲಸಗಳಲ್ಲೊಂದಾಯಿತು. ಹಲವಾರು ಬಗೆಯ ಹಲವಾರು ಹೆಸರುಗಳ ಸೋಡ್ತಿಗಳಿಗೆ ಹಣ ಕಟ್ಟಿದರೆ ಒಂದೇ ಉಸುರಿಗೆ ಲಕ್ಷಗಟ್ಟಲೆ ಸಿಗಬಹುದೆಂಬ ಕನಸಿನ ಗೋಪುರಗಳನ್ನು ಕಟ್ಟುತ್ತಾ ಹಣಸುರಿಯತೊಡಗಿದರು. ತನ್ನಂತೆಯೇ ತಿರುಗಾಡಿ ಗೆಳೆಯರಾದ ರಾಮರಾಯರು, ದೂಮಪ್ಪ ಸೆಟ್ಟರು, ಐತಪ್ಪ ಪೂಜಾರಿ, ಮದನ ಮೂಲ್ಯ ಮೊದಲಾದ ಜನರೊಂದಿಗೆ ಹಾಳು ಹರಟೆ ಹೊಡೆದು ಜುಗಾರಿ ಆಡುತ್ತಾ ಕುಳಿತರೆ ಹಗಲು ಇರುಳಾದರೂ ಇರುಳು ಹಗಲಾದರೂ ಕೆಲವೊಮ್ಮೆ ತಿಳಿಯದಾದರು. ಈ ರೀತಿ ಉಂಡಾಡಿ ಗೆಳೆಯರೊಂದಿಗೆ ನೇರಿ ಮದಿರಾ

ದೇವಿಯನ್ನೂ ಹತ್ತಿರ ಬರಮಾಡಿಕೊಂಡರು. ಈ ರೀತಿ ಕೃಷ್ಣ ಭಟ್ಟರಿಗೆ ಹಣ ಒಂದು ಮೈಯುಳಿಯದೆ ಖರ್ಚಾಗತೊಡಗಿತು. ಸ್ವತಂತ್ರರಾಗಲು ಹಣ ಕೂಡಿಸುವುದಂತಿರಲಿ. ದುರ್ವಿನಿಯೋಗಕ್ಕೆ ಮನೆಯಿಂದ ತಂದುದು ಸಾಕಾಗದೆ ಒರುತ್ತಿತ್ತು. ಹಣ ಸಾಕಾಗದೆ ಬರುವಾಗ ಸಾಲ ಕೇಳುವ ಸಾಲಮಾಡುವ, ಕೆಲಸಕ್ಕೂ ಸುರು ಹಚ್ಚಿದರು. ಸಾಲಕೊಟ್ಟು ಬಲೆಬೀಸಿ ತಮ್ಮೆಡೆಗೊಯ್ದು ಸಾಮಾನುಗಳನ್ನು ಲಾಭಕ್ಕೆ ಪಡೆಯುವ ಜನರು ಎಲ್ಲೆಡೆಗಳಲ್ಲೂ ಇರುವಂತೆ ಬೆಳ್ಪಾರೆಯಲ್ಲೂ ಇದ್ದರು. ಗಣೇಶ ಪ್ರಭುಗಳು ಕೃಷ್ಣ ಭಟ್ಟರು ಅಡಿಕೆ ತಂದುಕೊಡುವ ಶರತದಲ್ಲಿ ಕಡಕೊಡತೊಡಗಿದರು. ಗೋಳಿಕಟ್ಟೆಯಲ್ಲಿ ಬೆಳೆಯುವ ಫಸಲಿನ ಮಟ್ಟಿಗೆ ಕಡಕೊಟ್ಟು ಗಣೇಶ ಪ್ರಭುಗಳು ಕೃಷ್ಣ ಭಟ್ಟರ ತೋಟದಲ್ಲಿನ ಅಡಿಕೆಯೇ ಮೊದಲಾದುವನ್ನು ಫಲ ಬಂದ ಹಾಗೆ ತಮ್ಮೆಡೆಗೆ ತರಿಸಿಕೊಂಡರು. ಈ ರೀತಿ ಸರ್ವನಾಶವಾಗುತ್ತಿದ್ದರೂ ಕೃಷ್ಣ ಭಟ್ಟರಿಗೆಚ್ಚರ ಬರಲಿಲ್ಲ. ಇಡೀ ದಿನ ಪೋಕರಿಗಳೊಂದಿಗೆ ಅಲೆದಾಡಿ ದುರ್ವ್ಯಸನಗಳನ್ನು ಮತ್ತೂ ಮತ್ತೂ ಹೆಚ್ಚಿಸಿಕೊಳ್ಳುತ್ತಿದ್ದರು.

ಕೂಲಿಗಳು ತಮ್ಮ ಹೊಟ್ಟೆ ತುಂಬಿಸಲಿಕ್ಕಾಗಿ ಹಾಜರಿ ಕೊಟ್ಟು ತಮ್ಮಿಷ್ಟ ಬಂದಂತೆ ನಡೆಯುತ್ತಿದ್ದುದರಿಂದ ಗೋಳಿಕಟ್ಟೆಯಲ್ಲಿ ಜಮೀನಿನಲ್ಲಿ ಕೆಲಸವೇನೂ ಆಗುತ್ತಿರಲಿಲ್ಲ. ನೀರು ಸೊಪ್ಪು ಗೊಬ್ಬರಗಳಿಲ್ಲದೆ ಅಡಿಕೆ ತೋಟ ಒಣಗಿತು. ಯದ್ವಾತದ್ವಾ ಮಾಡಿದುದರಿಂದ ಗದ್ದೆಯಲ್ಲಿ ಭತ್ತವೂ ಬೆಳೆಯದಾಯಿತು. ಕೃಷಿಯ ಗುಟ್ಟರಿಯದ ಕೃಷ್ಣಭಟ್ಟರು "ಎಷ್ಟು ಗೈದರೂ ಫಲಬರಲಿಲ್ಲ. ದುಡ್ಡೆಷ್ಟು ಸುರಿದರೂ ಬೆಳೆಬಾರದ ಪ್ರಯೋಜನವಿಲ್ಲದ ಹಾಳು ಆಸ್ತಿ" ಎನತೊಡಗಿದರು. ಗಾಳಿಯಲ್ಲಿ ತಮ್ಮಿಷ್ಟ ಬಂದಂತೆ ವಿಹರಿಸುತ್ತಿರುವ ಗಂಧರ್ವರಂತಿದ್ದರಲ್ಲದೆ ಲೋಕದಲ್ಲಿ ಸಾಮಾನ್ಯ ಮಟ್ಟಿಗೆಲ್ಲರಂತೆ ಬದುಕಬೇಕೆಂಬುದನ್ನು ಯೋಚಿಸುತ್ತಿರಲಿಲ್ಲ.

ವಾಸುದೇವ ಭಟ್ಟರು ಒಂದು ವರ್ಷ ಕಳೆದು ಕಾಲುಗುಣವಾದಾಗ ಬಂದು ನೋಡುವುದೇನು ತೋಟವೂ ಗದ್ದೆಯೂ ತಮ್ಮೆಡೆಗೆ ಕೃಷ್ಣ

ಭಟ್ಟರು ದೃಷ್ಟಿ ಚೀರಿಲ್ಲವೆಂಬುದನ್ನು ಸ್ಪಷ್ಟ ತಿಳಿಸಿದುವು. ಗೋಳಿ ಕಟ್ಟೆಯ ಉತ್ಪತ್ತಿ ಕುರುಡು ಕಡ್ಡಿ ಸಹ ಇಲ್ಲದೆ ಧಾನಾಹಾನಿಯಾಗಿತ್ತು. ಮನೆಯಿಂದ ತಂದ ಹಣಸಹ ಏನಾಯಿತೆಂದೆನ್ನುವ ವಿವರವರಿಯುತ್ತಿರ ಲಿಲ್ಲ. ವಾಸುದೇವ ಭಟ್ಟರಿಗೆ ದಿಗ್ಭ್ರಮೆ ಹಿಡಿಯಿತು. ಕೃಷ್ಣಭಟ್ಟ ರೇನಾದರೂ ಹೇಳುತ್ತಿದ್ದರಲ್ಲದೆ ಸಮರ್ಪಕವಾಗಿ ಉತ್ತರ ಕೊಡುತ್ತಿರ ಲಿಲ್ಲ. ಆ ಊರ ಜನರೊಡನೆ ಕೇಳಿ ತಿಳಿದಾಗ ಎಲ್ಲವೂ ತಿಳಿದು ಬಂದುವು. "ತಾನೊಂದು ನೆನಸಿದರೆ ದೈವವುಗುದೊಂದನೆನೆಯುವುದು" ಎಂದೇ ಆಗುತ್ತಿರುವುದಲ್ಲ. ಹೀಗಾದಲ್ಲಿ ಉಳಿಗಾಲವಿಲ್ಲ ಗೇಣಿಗೂ ಖರ್ಚಿಗೂ ಮನೆಯಿಂದ ಹಣ ತಂದು ಗೋಳಿಕಟ್ಟೆಯುಲ್ಲಾಸ್ತಿ ಗೇಣಿಗೆ ಮಾಡಿ ಊರಲ್ಲಿ ಉಳಿಯುವಂತಿಲ್ಲ. ಕೈ ಮೀರಿ ಹೋದ ಈತನನ್ನು ನರಿದಾರಿಗೆ ತಂದಾಗ ಒನಕೆ ಚಿಗುರುವುದು. ಬಂದನಷ್ಟವೇ ಸಾಕು. ಈ ಆಸ್ತಿ ಇನ್ನು ಮೇಲೆ ಗೇಣಿಗೆ ಮಾಡಿಕೊಳ್ಳುವ ಪಂಚಾಯಿ ತಿಯೂ ಬೇಡ. ಎಂದು ಕೂಡಲೇ ನಿರ್ಧರಿಸಿ ಬಿಟ್ಟರು. ಕುಂಞಂಬು ನಾಯರುಗಳೊಡನೆ "ತಮ್ಮಿಂದ ಪೂರೈಸುವುದಿಲ್ಲ" ಎಂದು ಹೇಳಿ ರಾಜಿ ಪಂಚಾಯಿತಿಕೆ ಮಾಡಿ ದಂಡತೆತ್ತು ಇದ್ದಕ್ಕಿದ್ದ ಹಾಗೆ ಆಸ್ತಿ ಯನ್ನು ಬಿಟ್ಟುಕೊಟ್ಟರು. "ಇನ್ನು ಇವನನ್ನು ಕಣ್ಣೆದುರು ಇರಿಸಿ ಕೊಳ್ಳುವೆ. ದುಡಿಯದಿದ್ದರೆ ಬೇಡ. ಊಟ ಮಾಡಿಕೊಂಡು ಮನೆ ಯಲ್ಲಿ ಬಿದ್ದಿರಲಿ. ಹಾಗಾದಲ್ಲಿ ಈ ರೀತಿ ನಷ್ಟಹಾಕುವುದಾದರೂ ಇಲ್ಲದಾಗುವುದು ಎಂದು ಕೃಷ್ಣ ಭಟ್ಟರನ್ನು ಕುಟುಂಬ ಸಮೇತ ಮನೆ ಕಡೆಗೆ ಕರೆಸಿಕೊಂಡರು.

## ಸುಳಿ ೫

ಸ್ವತಂತ್ರವಾಗಿ ಆಕಾಶದಲ್ಲಿ ವಿಹರಿಸುತ್ತಿರುವ ಪಕ್ಷಿಯನ್ನು ಹಿಡಿದು ಗೂಡಿನಲ್ಲಿಕ್ಕಿದಂತಾಯಿತು ಕೃಷ್ಣ ಭಟ್ಟರಿಗೆ ಮನೆಗೆ ಬಂದುದು. ತನ್ನ ದಾರಿಗಳಿಗಡ್ಡ ಬರುವವರಲ್ಲಿ ಮೊತ್ತಮೊದಲಿಗರೇ ತಂದೆಯವರಾದ ವಾಸುದೇವ ಭಟ್ಟರು. ಅವರಿಗೆ ಮಗನಾಗಿ ಹುಟ್ಟಿದ ತಪ್ಪಿಗೆ ತಲೆ ತಗ್ಗಿಸಿ ನಡೆಯದೆ ವಿಧಿಯಿಲ್ಲ. ಮನೆಯಲ್ಲಾದರೆ ಮನೆಯಲ್ಲೇ

ಇರುವೆ. ಹೇಗಾದರೂ ಸರಿ. ಏನಾದರೂ ಮಾಡಿ ಒಂದಲ್ಲ ಒಂದು ಬಗೆಯಲ್ಲಿ ನಾನೀಗ ಕಾಣುತ್ತಿರುವ ಕನಸುಗಳನ್ನು ಪೂರೈಸಿಯೇ ತೀರುವೆ. ಗೋಳಿಕಟ್ಟೆ ಬಿಟ್ಟುಬರುವಾಗ ಸಂಪಾದಿಸಿದ ಹಣ ತುಸು ಮಟ್ಟಿಗೆ ಕೈಯಲ್ಲಿದೆ. ಆ ಹಣವನ್ನು ಸ್ಪರ್ಧೆಗಳಿಗೂ ಸೋಡ್ತಿಗಳಿಗೂ ಫಲಸಿಗುವ ವರೆಗೆ ವ್ಯಯಿಸುವೆ. ಸ್ಪರ್ಧೆಯಲ್ಲಾಗಲಿ ಸೋಡ್ತಿಯಲ್ಲಾಗಲಿ ಒಮ್ಮೆಯಲ್ಲವಾದರೆ ಮತ್ತೊಮ್ಮೆ ಯಾವಾಗಲಾದರೂ ಹಣ ಸಿಗದಿರದು. ಬಹುಮಾನ ಸಿಕ್ಕಿ ಹಣ ಝಣಝಣ ಎಂದು ಕೈಯಲ್ಲಿಲು ಗಾಡತೊಡಗಿದರೆ ನನ್ನಿಷ್ಟ ನನಗೆ. ಈ ಹಂಗಿನ ಜೀವನ ಮತ್ತೆ ಯಾರಿಗೆ ಬೇಕು. ಈಗ ಮನೆಯಿಂದ ಹೊರಬಿದ್ದು ಏಕಾಏಕಿ ಸ್ವತಂತ್ರನಾಗಲು ಸಾಕಷ್ಟು ಅನುಕೂಲವಿಲ್ಲ. ಕಾಲಬರಲಿ ನೋಡಿಕೊಳ್ಳುವ. ಸದ್ಯಃ ಕಮಲದೆಲೆ ನೀರಲ್ಲಿದ್ದರೂ ತೊಯ್ದು ಹೋಗದಿರುವಂತೆ ನನ್ನಷ್ಟಕ್ಕೆ ನಾನಿರುವೆ ಎಂದು ಯೋಚಿಸಿ ಮನೆ ವಿಷಯದ ಕೆಲಸಗಳಾವುವಕ್ಕೂ ಕೈಯಿಕ್ಕದೆ ತಮ್ಮಷ್ಟಕ್ಕೇ ಕೃಷ್ಣ ಭಟ್ಟರಿರತೊಡಗಿದರು. ಉಂಡು ತಿಂದು ತಿರುಗಾಡಿ ಸ್ಪರ್ಧೆಯೋ ಸೋಡ್ತಿಯೋ ಮತ್ತಾವುದಾದರೂ ಬೇಡದ ಕೆಲಸವಿದ್ದರೆ ಅದರಲ್ಲಿ ತಲ್ಲೀನರಾಗಿರುತ್ತಿದ್ದರು. "ಹೀಗಿರಬಾರದು, ಮೈಗಳ್ಳನಾಗಿರಬಾರದು. ಏನಿಲ್ಲವೆಂದರೂ ಅವರವರ ಉಪ್ಪಿನ ಖರ್ಚಿಯ ಮಟ್ಟಿಗಾದರೂ ದುಡಿಯಬೇಕು" ಎಂದು ವಾಸುದೇವ ಭಟ್ಟರೂ ಗಂಗಮ್ಮನೂ ಹೇಳಿದರೆ ಕೃಷ್ಣ ಭಟ್ಟರು ಕೇಳಿಯೂ ಕೇಳದಂತಿದ್ದರು. ಒಮ್ಮೊಮ್ಮೆ "ನೀವು ಹೇಳಿ ನನ್ನನ್ನು ದುಡಿಸಬೇಕಾದ್ದಿಲ್ಲ. ದುಡಿಯಲು ಮನವಿದ್ದರೆ ದುಡಿಯುವೆ. ಇಲ್ಲವಾದರೆ ಇಲ್ಲ. ದುಡಿಯದೆ ಇರಬಾರದೆಂದು ನೀವೊತ್ತಾಯಿಸಿ ಪೀಡಿಸುವಿರಾದರೆ ನಿಮ್ಮ ಮಗ ನಾನು. ನನಗೂ ಈ ಆಸ್ತಿಯಲ್ಲಿ ಹಕ್ಕಿದೆ. ನನ್ನದನ್ನು ನನಗಿತ್ತುಬಿಡಿ. ನಿಮ್ಮ ಗೊಣಗಾಟ ಕೇಳಿ ನನಗೆ ಸಾಕೋ ಸಾಕಾಯಿತು. ಈ ಮನೆಗೆ ಕಾಲಿಟ್ಟನಂತರ ಒಂದಿಷ್ಟು ನೆಮ್ಮದಿಯೆಂಬುದನ್ನು ಕಂಡರಿಯೆ. ನಿಮ್ಮೊಡನೆ ದುಡಿದುಂಡು ಕೂಡಿ ಬಾಳಲು ನನ್ನಿಂದಾಗದು" ಎಂದು ರೇಗಿ ಕಠೋರವಾಗಿ ಖಾಡಾಖಾಡಿ ಉತ್ತರಕೊಟ್ಟು ಜನನೀ ಜನಕರ ಹೃದಯ ಚೂರುಚೂರಾಗುವಂತೆ ವರ್ತಿಸುತ್ತಿದ್ದರು. ತಮ್ಮ ಪದ್ಮನಾಭ ಭಟ್ಟ

ರನ್ನು ಕಂಡರೆ ಕೃಷ್ಣ ಭಟ್ಟರಿಗೊಂದು ಬಗೆಯ ತಿರಸ್ಕಾರ, ದ್ವೇಷ. ಅವರನ್ನು ಕಸಕ್ಕಿಂತಲೂ ಕಡೆಯಾಗಿ ತಿಳಿಯುತ್ತಿದ್ದರು. ಅವರೊಡನೆ ಒಂದು ಶಬ್ದ ಸಹ ಅವರು ಮಾತನಾಡುತ್ತಿರಲಿಲ್ಲ. "ಅಯ್ಯೋ ಈ ಶತಮೂರ್ಖನಿಗೆ ಬುದ್ಧಿ ಹೇಳಿದರೆ ಫಲವಿಲ್ಲ. ನಮ್ಮ ಪ್ರಾಕ್ತನ ಕರ್ಮದ ಫಲ. ಯಾರಿಂದೇನು ಮಾಡಲು ಸಾಧ್ಯ. ದೇವರೇ ಎಂತಹ ಸಂಕಷ್ಟ ತಂದೊಡ್ಡಿದೆ" ಎಂದು ವಾಸುದೇವ ಭಟ್ಟರೂ ಗಂಗಮ್ಮನೂ ಪ್ರತಿದಿನವೂ ಕಣ್ಣೀರಿಳಿಸತೊಡಗಿದರು.

ಕೃಷ್ಣ ಭಟ್ಟರ ಸಹಧರ್ಮಿಣಿ ಪ್ರಾರಂಭದಲ್ಲಿ ಮನೆಯವರೊಡನೆ ಕೆಲಸಗಳಲ್ಲಿ ಸಹಕರಿಸುತ್ತಿದ್ದಳು ಕೃಷ್ಣ ಭಟ್ಟರು "ಅಯ್ಯೋ! ಹೆಣ್ಣಿ ಗೇನೂ ತಿಳಿಯಲಾರದೆನ್ನುವುದು ಇದಕ್ಕೇ ಸರಿ ನೋಡು. ಈ ಮನೆಯಲ್ಲಿ ದುಡಿದು ನಮಗೇನೂ ಆಗತಕ್ಕುದು ಇಲ್ಲ. ನನ್ನ ಜನನೀ ಜನಕರು ಸರ್ವಾಧಿಕಾರಿಗಳು. ತಮ್ಮ ಪದ್ಮನಾಭ ಭಟ್ಟ ಯುವ ರಾಜ, ನಾವು ಅನ್ನಕ್ಕೆ ಬಂದು ಬಿದ್ದವರ ಹಾಗೆ. ಅವರಿಗೆ ನಮ್ಮಲ್ಲಿ ಗೌರವವಾಗಲಿ ಪ್ರೇಮವಾಗಲಿ ಏನೊಂದೂ ಇಲ್ಲ. ನಮ್ಮನ್ನು ಕಂಡರೆ ಅವರಿಗಾಗದು. ದಿನನಿತ್ಯ ನಮ್ಮನ್ನು ದುಡಿಯಿರಿ ದುಡಿಯಿರಿ ಎಂದು ಹೇಳುತ್ತಾ ತೊತ್ತುಗಳಂತೆ ದುಡಿಸುತ್ತಿದ್ದಾರೆ. ನಾವು ದುಡಿದರೂ ದುಡಿಯದಿದ್ದರೂ ಅನ್ನನೀಡದೆ ಅವರಿರರು. ದುಡಿ ದರೂ ವಿಶೇಷ ರೀತಿಯ ಮನ್ನಣೆ ದೊರೆಯದು. ನಮ್ಮ ತಲೆಯಡಿಗೆ ನಮ್ಮ ಕೈ. ಈಗಲೇ ದುಡಿದು ಮೈ ಬಡವಾಗಿಸಬಾರದು. ನಾವು ಸ್ವತಂತ್ರರಾಗಿ ಮನ್ನಣೆ ಪಡೆಯುವಾಗ ದುಡಿದರೆ ನಾಲದೇ?" ಎಂದು ಲಲಿತೆಯ ಕಿವಿಯೂದಿ ಬಿಟ್ಟರು. ಏನೂ ಅರಿಯದ ಹೆಂಗಸು ಲಲಿತೆ ಆಹುದೆಂದು ಭ್ರಮಿಸಿ "ಗಂಡನಂತೆ ಹೆಂಡತಿ"ಯಾದಳು.

ಮೊದಮೊದಲು ಲಲಿತೆಗೆ ಈ ಅಂಟುರೋಗ ಹಿಡಿಸದಿದ್ದರೂ ಮೆಲ್ಲ ಮೆಲ್ಲಗೆ ಗುರುಹಿರಿಯರಿಗೆದುರಾಗಿ ನಡೆಯುವ ಸುಮ್ಮಗಿದ್ದು ಬಿಡುವ ಅಂಟುರೋಗ ತಗಲಿತು. ದುಡಿಯದೆ ಇದ್ದು ಬಿಡುವುದು ಹಿತ ವೆನಿಸಿತು. ಅತ್ತೆ ಏನೆಂದರೂ ಕಿವಿಗೊಡದಾದಳು. ತಾನು ತನ್ನ

ಷತಿ ಇಷ್ಟು ಜನರಲ್ಲದೆ ಬೇರೆಯವರು ಮನೆಯಲ್ಲಿರುವರು; ಅವರನ್ನಾ ದರಿಸಬೇಕು; ಎಂಬ ಭಾವನೆ ಲಲಿತೆಗಿಲ್ಲದಾಯಿತು. ಮನಬಂದಂತೆ ಹೂ ಕೊಯಿದು ಕಟ್ಟಿ ಓರಣವಾಗಿ ತಲೆಬಾಚಿ ಶೃಂಗರಿಸಿಕೊಳ್ಳುವುದು, ಕಸೂತಿ ಹಾಕುವುದು, ಜೋಗುಳ ಹಾಡು ಕಲಿಯುವುದು, ಇಷ್ಟಲ್ಲದೆ ಇನ್ನಿತರ ಕೆಲಸಗಳಿಗೆ ತಲೆಗೊಡದಾದಳು. ಅತ್ತೆ ಗಂಗಮ್ಮ ಬೇಯಿಸಿ ಇಟ್ಟ ಅನ್ನವನ್ನು ತನಗೂ ತನ್ನ ಪತಿ ದೇವರಿಗೂ ಇಕ್ಕಿಕೊಳ್ಳುವಳ ಲ್ಲದೆ ಬೇರೇನೂ ಮಾಡಲಾರಳು. ಮಾತನಾಡುವುದಿದ್ದರೆ ಹರಟೆ ಹೊಡೆಯುವುದಿದ್ದರೆ ಪ್ರಿಯಕರ ಕೃಷ್ಣಭಟ್ಟರೊಂದಿಗೆ. ಇಲ್ಲವಾದರೆ ನೆರೆ ಹೊರೆಯ ಹೆಂಗಸರೊಂದಿಗೆ. ಮನೆಯಲ್ಲುಳಿದವರೊಂದಿಗೆ ಸಿಟ್ಟಿಂದು ಸಹ ಮಾತು ಆಡಲಾರಳು. ಈ ರೀತಿ ಮನೆಯೊಳಗೆ ಕೃಷ್ಣ ಭಟ್ಟರು ವೈಷಮ್ಯ ಬೆಳೆಸಿದರು.

ಕೃಷ್ಣ ಭಟ್ಟರಿಗೆ ಆಸ್ತಿಯಲ್ಲಿರುವ ಹಕ್ಕನ್ನಿತ್ತು ಮನೆಯಿಂದ ಬೇರ್ಪಡಿಸುವ; ಎಲ್ಲಿ ಬೇಕಾದರೂ ಹೋಗಿ ಏನು ಬೇಕಾದರೂ ಮಾಡಿ ಕೊಳ್ಳಲಿ. ಪ್ರತಿದಿನವೂ ಈ ಹುಳಿರಗಳೆ ಇಲ್ಲದಂತಾಗಿ ನಾವಾದರೂ ಒಂದಿಷ್ಟು ಸುಖವಾಗಿ ಉಸಿರು ಬಿಡಬಹುದಲ್ಲ ಎಂದು ಒಮ್ಮೊಮ್ಮೆ ವಾಸುದೇವ ಭಟ್ಟರ ಮನಸನುತಿಯುತ್ತಿತ್ತು. "ಆದರಾತನಿಗೆ ಕೊಡ ಬೇಕಾದುದನ್ನು ಕೊಟ್ಟುಬಿಟ್ಟಲ್ಲಿ ಮೂರನೇ ದಿನಗಳಲ್ಲಿ ಇದ್ದುದನ್ನೆಲ್ಲಾ ಮುಗಿಸಿ ಭಿಕ್ಷಾಪಾತ್ರ ಹಿಡಿಯುವುದನ್ನು ಹೆತ್ತು ಸಾಕಿ ಸಲಹಿದ ನಾವು ಕಣ್ಣಾರೆ ಕಾಣಬೇಕಲ್ಲ. ಹಲವಾರು ಹರಕೆ ಹೊತ್ತು ಹುಟ್ಟಿದ ಪುತ್ರನು ಹೊರಲಾಗದ ಸಂಕಟ ತಂದೊಡ್ಡುತ್ತಿರುವನಲ್ಲಾ! ಅವನೆಂತೂ ಉಳಿ ಯುವಂತಿಲ್ಲ, ಬಾಕಿಯವರಾದರೂ ಉಳಿಯಲಿ ಎಂದವನನ್ನು ಬೇರ್ಪ ಡಿಸಿದರೆ ಸಾಯುವ ಕಾಲಕ್ಕೆ ಬಾಯಿಗೆ ತುಲಸಿ ಗಂಗೋದಕ ಸಹ ಬಿಡಲಾರ. ಅದುದಾಗಲಿ, ಉತ್ತರ ಕ್ರಿಯೆ ಮಾಡಲಿಕ್ಕಾದರೂ ಹಿರಿಯ ಮಗಬೇಕಲ್ಲ. ನಾಸಿರುವಾಗ ಅವನನ್ನು ಬೇರ್ಪಡಿಸುವುದಿಲ್ಲ. ಲೋಕಾ ಪವಾದಕ್ಕೆ ಬಲಿಬೀಳುವುದಿಲ್ಲ. ಬಂದುದನ್ನೆಲ್ಲಾ ಕಣ್ಣು ಮುಚ್ಚಿ ಸಹಿಸಿಕೊಳ್ಳುವೆ" ಎಂದು ವಾಸುದೇವ ಭಟ್ಟರು ತಮ್ಮ ದೃಢನಿರ್ಧಾರ ವನ್ನು ಗಂಗಮ್ಮನೊಡನುಸುರಿದರು.

ಏನೋ ಸ್ವಲ್ಪ ಪುಡಿಕಾಸು ಕೃಷ್ಣ ಭಟ್ಟರ ಕೈಯಲ್ಲಿದ್ದುದು ಕೆಲವೇ ದಿನಗಳಲ್ಲಿ ಮುಗಿದುಹೋದುವು. ಅವರ ದುರಭ್ಯಾಸದ ನಿತ್ಯವೃತ್ತಿಗಳಿಗೆ ಹಣದ ಮುಗ್ಗಟ್ಟು ಆವರಿಸಿತು. ಬಹುಮಾನ ಸಿಗುವ ವರೆಗೆ ಒಗಟುಗಳಿಗೆ ಹಣ ಕಟ್ಟುವುದನ್ನೂ ಸೋಡ್ತಿಗಳಿಗೆ ಹಣ ಸುರಿಯುವುದನ್ನೂ ಇನ್ನಿತರ ಅತ್ಯಾವಶ್ಯಕಗಳೆಂದು ತಿಳಕೊಂಡ ಕೆಲಸಗಳನ್ನೂ ಬಿಟ್ಟುಬಿಡುವುದು ಅವರಿಗೊಗ್ಗದ ಮಾತಾಯಿತು. ಈ ಮನೆಯ ಹಣದಲ್ಲಿ ತನಗೂ ಹಕ್ಕಿದೆ. ಕೇಳಿದರೆ ಕೊಡಲಾರರು. ಕೊಡದಿದ್ದರೇನಾಯಿತು? ಇಟ್ಟಲ್ಲಿಂದ ತೆಗೆದುಕೊಳ್ಳುವೆ. ಹಣ ತನ್ನದೂ ಆಗಿರುವಾಗ ಅಪಹಾರ ದೋಷ ತಗಲಲಾರದು. ಬೇಕಾದಂತೆ ಹಣ ತೆಗೆದು ಕೊಳ್ಳುವೆ; ನನ್ನಿಚ್ಛೆ ನನಗೆ ಎಂದು ಕೃಷ್ಣ ಭಟ್ಟರ ಮನ ಬಂದೊದಗಿದ ಮುಗ್ಗಟ್ಟನ್ನು ಪರಿಹರಿಸಲು ಸಲಹೆ ನೀಡಿತು. ವಾಸುದೇವ ಭಟ್ಟರು ಹಣವನ್ನು ಪೆಟ್ಟಿಗೆಯಲ್ಲಿರಿಸಿ ಬೀಗ ಜಡಿದು ಅದರ ಕೈ (ಕೀ)ಯನ್ನು ಗುಪ್ತವಾದೊಂದು ಸ್ಥಳದಲ್ಲಿರಿಸುತ್ತಿದ್ದರು. ಚಾಣಾಕ್ಷನಾದ ಕೃಷ್ಣ ಭಟ್ಟರಿಗದು ತಿಳಿಯದಿರುವುದೇ? ಬೇಕಾದಂತೆ ಹಣ ತೆಗೆದು ಬೀಗದ ಕೈಯನ್ನು ಅದೇ ಜಾಗದಲ್ಲಿರಿಸಿದರು. ಹೀಗಿರಲು ಹಲವು ದಿನಗಳ ನಂತರ ದುಡ್ಡೆಷ್ಟಿವೆ ನೋಡಿ ಬಿಡುವ ಎಂದು ಸ್ವಲ್ಪ ದುಡ್ಡನ್ನು ಪೆಟ್ಟಿಗೆಯಲ್ಲಿರಿಸುವ ವೇಳೆಯಲ್ಲಿ ಲೆಕ್ಕ ಮಾಡಿ ನೋಡಿದರು. ಪೆಟ್ಟಿಗೆಯಲ್ಲಿ ಹಣ ಇಡುವಾಗ ವಾಸುದೇವ ಭಟ್ಟರು ಲೆಕ್ಕ ಮಾಡಿಯೇ ಇಡುತ್ತಿದ್ದರು. ಈಗ ನೋಡುವಾಗ ಸ್ವಲ್ಪ ಮಟ್ಟಿಗೆ ಹಣ ಕಾಣೆ. ವಾಸುದೇವ ಭಟ್ಟರಿಗೆ ಪ್ರಾಣವೇ ಹಾರಿಹೋಯಿತು. ಎಲ್ಲರನ್ನೂ ವಿಚಾರಿಸಿದರು. “ಎಲ್ಲರೂ ನಾವರಿಯೆವೆ”ಂದೇ ಉತ್ತರವಿತ್ತರು. ಕೃಷ್ಣ ಭಟ್ಟರೂ ಕೂಡ “ನಾನರಿಯೆ. ನಿಮ್ಮ ಬೀಗದ ಕೈಯನ್ನೇ ನಾನು ಕಂಡಿಲ್ಲ.” ಎಂದೆಂದರು. “ಬೀಗದ ಕೈ ಇಡುವಲ್ಲೇ ಇತ್ತು. ಅಲ್ಲಿಂದ ಅತ್ತಿತ್ತ ಆಗಿಲ್ಲ” ಎಂದು ವಾಸುದೇವ ಭಟ್ಟರಂದರು. “ಹಾಗಾದರೆ ನಿಮ್ಮ ಗ್ರಹಿಕೆಯ ಲೆಕ್ಕವೇ ತಪ್ಪಿರಬಹುದು. ನೀವು ಪೆಟ್ಟಿಗೆಯಲ್ಲಿಟ್ಟ ಹಣ ಅಷ್ಟೇ ಆಗಿರಬೇಕು” ಎಂದು ಕೃಷ್ಣ ಭಟ್ಟರು ವಾಸುದೇವ ಭಟ್ಟರನ್ನು ಮಂಕುಮಾಡಿದರು. ಆಗಿರಲೂ ಬಹುದೆಂದು ವಾಸುದೇವ

ಭಟ್ಟರು ಸುಮ್ಮಗಾದರು. ಸಮಾಧಾನ ತಂದುಕೊಂಡರು. ಆದರೂ ಮನಸ್ಸಿಗೆ ಶಾಂತಿ ಸಮಾಧಾನ ಬರಲಿಲ್ಲ. "ಆಗಲಿ, ನೋಡುವ" ಎಂದು ಬೀಗದ ಕೈಯನ್ನು ಆ ಜಾಗದಿಂದ ತಪ್ಪಿಸಿ ಮತ್ತೊಂದೆಡೆ ಇರಿಸಿದರು. ಕೃಷ್ಣ ಭಟ್ಟರಿಗದು ತಿಳಿಯಿತು. ಹತ್ತಾರು ದಿನ ಕಳೆದು ವಾಸುದೇವ ಭಟ್ಟರು ಪೆಟ್ಟಿಗೆ ಬಾಗಿಲು ತೆರೆದು ನೋಡುವಾಗ ಮತ್ತೂ ಹಣ ಕಡಿಮೆ. "ಆಹಾ! ಅಯ್ಯೋ!" ಎನ್ನುತ್ತಾ ಎದೆ ಮೇಲೆ ತಲೆಮೇಲೆ ಕೈಯಿಟ್ಟು ಗೋಳಿಟ್ಟರು. ಗೋಳಾಡಿ ಫಲವೇನು! ಕಡಿದ ನೀರು ಕಟ್ಟಕ್ಕೆ ಬರಲಾರದು. ಇನ್ನು ಮೇಲೆ ಹೆಚ್ಚು ಹಣ ಮನೆಯಲ್ಲಿಡಬಾರದು. ಎಲ್ಲಿಯಾದರೂ ಬೇಂಕಿನಲ್ಲೋ ರಿಕಾರ್ಡುಗಳಲ್ಲೋ ಭದ್ರವಾಗಿರಿಸಬೇಕು. ಇಲ್ಲಿ ಸ್ವಲ್ಪಮಟ್ಟಿಗೆ ಇಟ್ಟುಕೊಂಡರೆ ಸಾಕು. ಪೆಟ್ಟಿಗೆಗೆ ಬೀಗ ಜಡಿದು ಬೀಗದ ಕೈ ಭದ್ರವಾಗಿ ಸೊಂಟದಲ್ಲಿ ಕಟ್ಟಿಕೊಳ್ಳುವೆ. ಅಲ್ಲದೆ ಈಗಲೇ ಮುಂಜಾಗ್ರತೆಗಾಗಿ ಚನ್ನಾಗಿ ಮನೆಯವರನ್ನೆಲ್ಲಾ ಬೈದು ಭಂಗಿಸಿ ಪೆಟ್ಟಿಗೆಯನ್ನಾರೂ ಕಣ್ಣೆತ್ತಿ ಸಹ ನೋಡದಂತೆನಗುವೆ" ಎಂದು ಬಹು ದೊಡ್ಡ ಯೋಚನೆ ಮಾಡಿ ಸಮಾಧಾನಪಟ್ಟುಕೊಂಡರು.

ಹಣ ಕಾಣೆಯಾಗಿವೆಯೆಂದು ವಾಸುದೇವ ಭಟ್ಟರು ಸಿಕ್ಕಾಬಟ್ಟೆ ರೇಗಾಡಿದರು. ಬಾಯಿಗೆ ಬಂದ ಹಾಗೆ ಮನೆಯವರನ್ನೆಲ್ಲಾ ಬೈದು ಭಂಗಿಸಿದರು. ಮೈ ಚರ್ಮಸುಲಿದು ಹಾಕುವೆನೆಂದು ಬೊಬ್ಬಿರಿದರು. ಆದರೆ ಯಾರೂ ತುಟಿಪಿಟಕ್ಕೆನ್ನಲಿಲ್ಲ. ಕೃಷ್ಣ ಭಟ್ಟರಿಗೆ ಮಾತ್ರ ರೇಗಿತು. "ನಿಮ್ಮ ಬೈಗಳು ಕೇಳಿ ಕೇಳಿ ಸಾಕಾಯಿತು. ಈ ಮನೆಯಲ್ಲಿ ಬೈಗಳು ತಿಂದೇ ಹೊಟ್ಟೆ ತುಂಬಿಸಬೇಕು. ಹಣ ತೆಗೆದವರನ್ನು ಕಂಡುಹಿಡಿದು ಜರೆದು ಯೋಗ್ಯ ಶಿಕ್ಷೆಕೊಡಬೇಕು. ಹೀಗೆ ಕಂಡಾಬಟ್ಟೆ ಸಿಕ್ಕಸಿಕ್ಕವರನ್ನು ಜರೆಯುವುದಲ್ಲ. ಸುಮ್ಮನುಮ್ಮಗೆ ಜರೆದರೆ ನಾ ಸಹಿಸಲಾರೆ" ಎಂದು ಕೃಷ್ಣ ಭಟ್ಟರು ಮಾರ್ನುಡಿದರು.

"ಯಾರು ತೆಗೆದಿರುವರೋ ಅವರನ್ನು ಬೈದೆ. ಈ ಬೈಗಳು ಅವರಿಗೆ ಮಾತ್ರ ಅನ್ವಯಿಸುವುದು. ಬಾಕಿಯವರಾರೂ ಉಸಿರೆತ್ತದಿರುವಾಗ ನೀನು ಮಾತ್ರ ಸಿಟ್ಟಿಗೆದ್ದೆ. ಕುಂಬಳಕಾಯಿ ಕದ್ದು ಹೆಗಲ

ಮೇಲೆ ಬೂದಿಯಿಲ್ಲವೆನ್ನುವಂತೆ ನಿನ್ನ ನಡತೆ. ಸಾಕು ನಿನ್ನ ಹೆಗ್ಗಳಿಕೆ, ಮುಚ್ಚು ಬಾಯಿ" ಎಂದು ವಾಸುದೇವ ಭಟ್ಟರು ಕಿಡಿಕಾರಿದರು.

ಹೌದು ಹೌದು ನಾನು ಕುಂಬಳಕಾಯಿ ಕದ್ದವ, ಹಣ ದೋಚಿದವ. ಹಾಗೆ ನಿಮ್ಮ ಬಾಯಿ ಸ್ಪಷ್ಟ ಹೇಳುತ್ತದೆ. ಕಳವು ರುಜು ವಾತು ಮಾಡಿರಿ. ಹಿಡಿದು ಕಟ್ಟಿ ಹಾಕಿ ಹೊಡೆಯಿರಿ. ಸಂಶಯಪಟ್ಟು ಏನಾದರೂ ಸಾಧುಗಳ ಮೇಲೆ ಅಪವಾದ ಹೊರಿಸಿದರೆ ಜಾಗ್ರತೆ! ಎಂದು ಕೃಷ್ಣ ಭಟ್ಟರು ಕಣ್ಣು ಕೆಂಪು ಮಾಡಿದರು.

"ಮೊತ್ತಮೊದಲು ಕಟ್ಟಿ ಹಾಕಿ ಗುದ್ದಬೇಕಾದ್ದು ನಿನಗೆ" ಎಂದು ವಾಸುದೇವ ಭಟ್ಟರು ಔಡುಗಚ್ಚಿದರು.

"ನೋಡುವ? ಯಾರದು ನನ್ನನ್ನು ಕಟ್ಟಿ ಹಾಕಿ ಹೊಡೆಯು ವವರು?" ಎಂದರು ಕೃಷ್ಣ ಭಟ್ಟರು ದರ್ಪದಿಂದ.

"ಮರ್ಯಾದೆಗಾಗಿ ದೊಡ್ಡ ಮಗನೆಂದು ಬಿಟ್ಟಿದ್ದೇನೆ. ನಿನ್ನನ್ನು ಜೀವಂತ ಹುಗಿಯಲೂ ನನಗೆ ಸಾಧ್ಯವಾಗಲಾರದೆಂದು ಬಗೆದೆಯಾ?" ಎಂದು ವಾಸುದೇವ ಭಟ್ಟರು ಮಾರ್ನುಡಿದರು.

"ಇನ್ನದೊಂದು ಮಾತ್ರ ಬಾಕಿ. ಬೈಗಳು ತಿನ್ನಬೇಕು ಪೆಟ್ಟು ತಿನ್ನಬೇಕು. ಕಟ್ಟಿ ಹಾಕಿಸಿಕೊಳ್ಳಬೇಕು. ಗುದ್ದು ಹಾಕಿಸಿಕೊಳ್ಳ ಬೇಕು. ಸಾಲದಿದ್ದರೆ ಜೀವಂತ ಹುಗಿಯಿಸಿಕೊಳ್ಳಬೇಕು. ಸಾಕೋ ಸಾಕು" ನನಗೆ ನಿಮ್ಮೊಂದಿಗೆ ಕೂಡಿ ಬಾಳಿದುದು. ನನಗಿರುವುದನ್ನು ಕೊಟ್ಟು ಬಿಟ್ಟರೆ ನನ್ನ ಮನಬಂದಂತೆ ಎಲ್ಲಿಯಾದರೂ ಹೋಗಿ ಗಂಜಿ ನೀರು ಕುಡಿದು ಕೊಂಡಾದರೂ ಇರುವೆ. ನನಗಿನ್ನು ಈ ಸ್ವರ್ಗ ಲೋಕದ ಸುಖವಾಸ ಬೇಡ. ನಾನಿನ್ನು ಇಲ್ಲಿ ನಿಲ್ಲಲಾರೆ. ಈಗಲೇ ಹೊರಟು ಬಿಡುವೆ" ಎಂದು ಕೃಷ್ಣ ಭಟ್ಟರೂ ಉದ್ರಿಕ್ತರಾಗಿ ನುಡಿದರು.

"ಇದೆಲ್ಲಾ ನನ್ನ ಸ್ವಾರ್ಜಿತ. ನಾನಿರುವ ವರೆಗೆ ಯಾರೊಬ್ಬರಿಗೂ ಇದರಲ್ಲಿ ಹಕ್ಕಿಲ್ಲ. ನನ್ನ ಕಾಲಾನಂತರ ಸಹ ಇದರಲ್ಲಿ ಒಂದು ಕವಡೆ ಸಹ ನಿನಗೆ ಸಿಗದಂತೆ ಮಾಡುವೆ, ಹೋಗು ನಡೆ. ಇಲ್ಲಿ ನಿಲ್ಲ ಬೇಡ. ನೀನೂ ಒಬ್ಬ ಗಂಡುಸು. ಸಾಧ್ಯವಾದರೆ ದುಡಿದು ತಿನ್ನು.

ಇಲ್ಲವಾದರೆ ಬೇಡಿತಿನ್ನು. ಹೋಗು ನಡೆ" ಎಂದು ವಾಸುದೇವ ಭಟ್ಟರೂ ಸಿಟ್ಟಿನಿಂದ ಎಚ್ಚರ ತಪ್ಪಿದಂತಾಗಿ ನುಡಿದರು.

ಕೃಷ್ಣ ಭಟ್ಟರು ಪರಿಸ್ಥಿತಿ ಈ ರೀತಿ ವಿಪರೀತಕ್ಕೇರಬಹುದೆಂದು ಯೋಚಿಸಿರಲಿಲ್ಲ. ತಾನೆದುರು ನುಡಿದಾಗ ಹೆತ್ತವರು ಜಗ್ಗಿಹೋಗುವರೆಂದು ತಿಳಿದಿದ್ದರು. ಹೊರಟು ಹೋಗುವೆನೆಂದು ಬೆದರಿಸಿದಾಗ ಹೊರಡು ನಡೆಯೆಂದೇ ಉತ್ತರ ಬಂದಿತು. ಇನ್ನು ಹೊರಹೊರಡದಿದ್ದರೆ ತನ್ನ ಅಭಿಮಾನಕ್ಕೆ ಕುಂದು, ಪರಿಸ್ಥಿತಿ ಹದಗೆಟ್ಟಿತು; ಎಂದು ಕೃಷ್ಣ ಭಟ್ಟರು ತಾಳಮೇಳ ತಪ್ಪಿದರು. "ಈ ಆಸ್ತಿಯಲ್ಲಿ ನನಗೂ ಹಕ್ಕಿದೆಯೋ ಇಲ್ಲವೋ? ನೋಡಿಯೇ ಬಿಡುವೆ" ಎಂದು ಒಂದೇ ಒಂದು ನುಡಿ ವಾಸುದೇವ ಭಟ್ಟರಿಗುಸುರಿದರು. ತದನಂತರ ಸಿಟ್ಟಿನಿಂದ ಥರಥರ ನಡುಗುತ್ತಾ "ಲಲಿತಾ! ಲಲಿತಾ! ಬಾ! ಹೊರಡು" ಎಂದು ಬಲವಾಗಿ ಕೂಗಿದರು.

ಲಲಿತೆ ಬಂದಳು. ಬಂದು "ಏನು" ಎಂದು ಪ್ರಶ್ನಿಸಿದಳು. "ಇನ್ನಿಲ್ಲಿ ಕ್ಷಣಕಾಲವೂ ನಿಲ್ಲಬಾರದು. ಬೇಗ ಹೊರಡು." ಎಂದರು ಕೃಷ್ಣ ಭಟ್ಟರು.

"ಎಲ್ಲಿಗೆ?" ಎಂದು ಬಂತು ಲಲಿತೆಯ ಪ್ರಶ್ನೆ. "ಪ್ರಪಂಚವೆಂದರೆ ಇಷ್ಟೇ ಜಾಗವಲ್ಲ. ಅದು ವಿಶಾಲವಾಗಿದೆ. ಎಲ್ಲಿಗಾದರೂ ಹೋಗುವ, ಇಲ್ಲಿ ಮಾತ್ರ ನಿಲ್ಲುವುದು ಬೇಡ. ನನ್ನಾಜ್ಞೆಗೆ ತಲೆ ಬಾಗಿಸುವೆಯಾದರೆ ಹಿಂದುಮುಂದು ನೋಡದೆ ಶೀಘ್ರ ಹೊರಡು" ಎಂದು ಕಿಡಿಕಾರುತ್ತಾ ಕೃಷ್ಣ ಭಟ್ಟರಂದರು.

ಪತಿಯಾಜ್ಞೆಯನ್ನು ಶಿರಸಾವಹಿಸಿ ಲಲಿತೆ ಹೊರಟು ನಿಂತಳು. ಮನೆಬಿಟ್ಟು ಹೊರಡಲನುವಾದ ಮಗ ಮತ್ತು ಸೊಸೆಯರನ್ನು ನೋಡಿ ಹೆತ್ತಾಕೆ ಗಂಗಮ್ಮನ ಕರುಳು ಕತ್ತರಿಸಿತು. ಕಣ್ಣುಗಳಲ್ಲಿ ನೀರು ಹರಿಯಿತು. "ಎಲೇ ಮಗನೇ! ಹೊರಟೇ ಬಿಟ್ಟೆಯಾ! ತಂದೆಯವರೊಡನೆ ಕೋಪಿಸಿ ಹೋಗುವುದು ಸರಿಯಲ್ಲ. ಗುರುಹಿರಿಯರು ದೇವರಿಗೆ ಸಮಾನರು. ಅಪ್ಪ ಸಿಟ್ಟಿನ ಭರದಲ್ಲೆರಡು ಮಾತುಹೇಳಿ ಬಿಟ್ಟರೆ

ಕಲಿತವನಾದ, ಬುದ್ಧಿವಂತನಾದ ನೀನದನ್ನು ಸೈರಿಸಿಕೊಳ್ಳಬೇಕು. ಶುದ್ಧ ತಿಳಿಗೇಡಿಗಳ ಹಾಗೆ ಹೀಗೆಲ್ಲಾ ಮಾಡಬಾರದು. ಲಲಿತೇ! ನಿನಗೂ ತಿಳಿಯದೇ? ಹೀಗೆ ಹೊರಟು ಹೋಗುವುದೆಂದರೆ ಏನದಕ್ಕರ್ಥವಿಲ್ಲವೇ?" ಎಂದು ಕಣ್ಣೀರಿಳಿಸುತ್ತಾ ಗಂಗಮ್ಮನುಸುರಿದಳು.

"ಹೆತ್ತವರು ಅವರವರ ನೆಲೆಗೆ ಸರಿಯಾಗಿದ್ದರೆ ಮಕ್ಕಳು ಮಕ್ಕಳ ಹಾಗೆ. ಹೊಲೆಯರನ್ನು ಬೈಯುವ ಹಾಗೆ ಬೈದರೆ ನನಗೇನು ಮರ್ಯಾದೆ ಎಳ್ಳಷ್ಟೂ ಇಲ್ಲವೇ? ಶಬ್ದಕ್ಕೆ ಅರ್ಥ ಮಾತ್ರವಲ್ಲ. ವ್ಯಂಗ್ಯವೂ ಇದೆ. ಅಮ್ಮಾ! ನನ್ನನ್ನು ತಡೆಯದಿರು. ಇನ್ನಿಲ್ಲಿ ನಿಲ್ಲಲಾರೆ" ಎಂದು ಕೃಷ್ಣ ಭಟ್ಟರು ಸಿಡುದಸಿಯಲ್ಲಿ ದೊಡ್ಡ ಅಭಿಮಾನಿಯಂತೆ ನುಡಿದರು.

"ಮಗೂ! ಕೃಷ್ಣಾ, ನಾನು ನಿನ್ನ ಹೆತ್ತಬ್ಬೆಯಲ್ಲವೇ? ನನ್ನ ಮಾತನ್ನಾದರೂ ಕೇಳು. ಹೋಗಲೇಬೇಕೆಂದಿದ್ದರೆ ಸಿಟ್ಟು ಮಾಡಿ ಹೋಗಬೇಡ. ಬಾ! ಕುಳಿತುಕೋ. ಒಲೆಯಲ್ಲಿ ಅನ್ನ ಬೇಯುತ್ತಿದೆ. ಅಟ್ಟ ಅನ್ನ ಉಣ್ಣದೆ ಹೋಗಬಾರದು. ತಂದೆಯವರು ನಿನಗೆಂದಿಗೂ ಬೇಕಾದವರು, ಅವರು ಪೂಜ್ಯರು. ಅವರ ಕಾಲು ಹಿಡಿ. ಅವರ ಮನಸ್ಸನ್ನು ನೋಯಿಸಿದರೆ ನಿನಗೆಂದಿಗೂ ಒಳ್ಳೆಯದಾಗದು. ತುಸು ವಿಚಾರಿಸಿ ನೋಡು" ಎಂದು ಗಂಗಮ್ಮ ಹಿತೋಕ್ತಿಗಳನ್ನಾಡಿದಳು.

ಆವೇಶ ಭರದಲ್ಲಿ ಕಣ್ಣು ಕಾಣದ ಕೃಷ್ಣ ಭಟ್ಟರಿಗೆ ಗಂಗಮ್ಮನಂದನುಡಿಗಳು? ಕೋಣನ ಮುಂದೆ ಕಿನ್ನರಿ ಬಾರಿಸಿದಂತಾದವು. "ಸಾಕು. ನಿನ್ನ ಪುರಾಣ. ಹಾಳುಹರಟೆ ನನ್ನ ದಾರಿ ನನಗೆ. ತಪ್ಪು ನನ್ನದಾಗಿರುತ್ತಿದ್ದರೆ ತಂದೆಯವರ ಕಾಲು ಹಿಡಿಯುತ್ತಿದ್ದೆ. ನೀನಂದಂತೆ ಮಾಡುತ್ತಿದ್ದೆ" ಎಂದು ಗರ್ವಿಷ್ಟರಾಗಿ ನುಡಿದರು.

"ಥೂ! ಚಾಂಡಾಲಾ! ತಪ್ಪೆಲ್ಲಾ ನನ್ನದು. ನಾನು ನಿನ್ನ ಕಾಲು ಹಿಡಿಯಬೇಕು, ಅಲ್ಲವೇ? ಮೈಗಳ್ಳನಾದ ನೀನು ಮನೆಬಿಟ್ಟು ಹೋಗಿ ತಿನ್ನುವುದಾದರೂ ಏನು? ಗಂಗಮ್ಮಾ! ನೀನೇನೂ ಹೇಳದಿರು. ಕುಳಿತು ತಿಂದು ಅಹಂಕಾರ ನೆತ್ತಿಗೇರಿದೆ. ಇಳಿಯಲಿ. ಉಪವಾಸ ಬಿದ್ದಾಗ

ನಾಯಿಯಂತೆ ಬಂದಾನು. ಬುದ್ಧಿ ಬಂದೀತು" ಎಂದು ಸಿಟ್ಟಡರಿ ವಾಸುದೇವ ಭಟ್ಟರು ಅವರಿಬ್ಬರ ಸಂಭಾಷಣೆಯು ನಡುವಿನಲ್ಲಿ ಸರಿದರು.

ಕೃಷ್ಣ ಭಟ್ಟರು ಸಿಟಿನಿಂದ ಕಂಪಿಸತೊಡಗಿದರು. "ಆಗಲಿ ಹೇಗೆಲ್ಲಾ ಆಗಲಿರುವುದೆಂಬುದು ನಿಮ್ಮ ನುಡಿಯನ್ನು ಹೊಂದಿಕೊಂಡಿರಲಾರದು. ಭವಿಷ್ಯ ಅದನ್ನು ನಿರ್ಧರಿಸುವುದು" ಎಂದೆನ್ನುತ್ತಾ ಸರಸರನೆ ನಡೆದೇ ಬಿಟ್ಟರು. ಲಲಿತೆ ಮೌನವಾಗಿ ತಲೆತಗ್ಗಿಸಿ ಪತಿಯ ಹೆಜ್ಜೆಯನ್ನನುಸರಿಸಿದಳು.

ದಂಪತೀ ಸಮೇತರಾಗಿ ಕೃಷ್ಣ ಭಟ್ಟರ ಸವಾರಿ ಮಾವ ಶಂಭು ಭಟ್ಟರಲ್ಲಿಗೆ ಚಿತ್ತೈಸಿತು. ಅನಿರೀಕ್ಷಿತವಾಗಿ ಮಗಳೊಂದಿಗೆ ಬಂದ ಅಳಿಯನನ್ನು ಕಂಡು ಮಾವನಿಗೆ ಹಿಡಿಸಲಾಗದ ಸಂತೋಷ, ಸಂಭ್ರಮವಾಯಿತು. ಅಮಿತೋತ್ಸಾಹಪೂರ್ವಕ ಅಳಿಯನನ್ನು ಸ್ವಾಗತಿಸಿದರು. ಅಳಿಯ ಕೃಷ್ಣ ಭಟ್ಟರನ್ನು ಚಾಪೆ ಹಾಕಿ ಕುಳ್ಳಿರಿಸಿ ಕೈಕಾಲು ತೊಳೆಯಲು ನೀರು ತರಿಸಿದರು. ಮಗಳು ಲಲಿತೆಯನ್ನು ಮನೆಯೊಳಗೆ ಹೋಗಿ ತಾಯಬಳಿ ಸೇರೆಂದರು. ಬೇಕುಬೇಕಾದ ಉಪಚಾರಗಳನ್ನು ಮಾಡಿದರು. ಅಳಿಯ ಕೃಷ್ಣಭಟ್ಟರು ಎಲ್ಲವನ್ನೂ ಮರ್ಯಾದೆಗೆ ತಕ್ಕಂತೆ ಪರಿಗ್ರಹಿಸಿದರು. ತದನಂತರ ಊಟೋಪಚಾರಾದಿ ಕ್ರಿಯೆಗಳು ಕಳೆದು ಮಾವನೂ ಅಳಿಯನೂ ಜಗಲಿಯಲ್ಲಿ ಕುಳಿತು ಮಾತನಾಡತೊಡಗಿದರು. ಹಲವಾರು ಮಾತುಕತೆಗಳು ನಡೆದುವು. ಆ ಮೇಲೆ ಶಂಭು ಭಟ್ಟರು "ಮನೆಯಲ್ಲಿ ತಂದೆಯವರೇನು ಮಾಡುತ್ತಾರೆ? ಅವರು ಸೌಖ್ಯವಾಗಿರುವರೇ?" ಎಂದು ಪ್ರಶ್ನಿಸಿದರು.

"ಸೌಖ್ಯವೋ ಅಸೌಖ್ಯವೋ ಅದೆಲ್ಲಾ ನನಗರಿಯದು. ಯಜಮಾನರ ಸುದ್ದಿ ನಮಗೇಕೆ" ಎಂದು ಕೃಷ್ಣ ಭಟ್ಟರು ಓರೆಯಾಗಿ ನಿಸ್ಸಾರವಾಗಿ ಉತ್ತರವಿತ್ತರು.

"ಅದೇನು ಹಾಗನ್ನುತ್ತಿರುವೆ? ಅವರು ಯಜಮಾನರಾದರೆ ನೀನು ಕಿಜಮಾನ. ಅವರಿಗೆ ಇಳಿಪ್ರಾಯವಾಯಿತು. ನಿನ್ನಂತಹ ಕಾರ್ಯ

ನಿರ್ವಹಿಸುವ ಕಾರುಭಾರುದಾರಿಯಿಂದಲೇ ಅವರ ಕೆಲಸಗಳೆಲ್ಲಾ ಸಾಗಬೇಕು. ಅಂತಿರುವಾಗ ಅವರ ವಿಷಯ ನೀನರಿಯೆನೆನ್ನುತ್ತಿರುವುದು ಬಲು ಸೋಜಿಗ. ಪ್ರತಿಯೊಂದೂ ನಿನಗರಿತಿರಲೇಬೇಕಲ್ಲ." ಎಂದು ಶಂಭುಭಟ್ಟರು ನುಡಿದರು.

"ಇದ್ದಾನಲ್ಲ ಆ ಮಟ್ಟಿಗೆ ಅವರ ಪ್ರಿಯಪುತ್ರ ಪದ್ಮನಾಭ. ನನ್ನನ್ನು ಕಂಡರೆ ಅವರಿಗಾಗದು. ಹಾಗಾಗಿ ನಾನು ದೂರವಾಗಿದ್ದೇನೆ."

"ನೀನು ಹಿರಿಯ ಮಗ. ನಾಳೆ ಹೆಗಲೊಡ್ಡಿ ಕಾರ್ಯಭಾರ ಸಾಗಿಸತಕ್ಕವ. ನೀನು ದೂರವಾಗಿರಲಾಗದು. ಚೊಕ್ಕವಾಗಿ ಕಾರ್ಯನಿರ್ವಹಿಸಬೇಕು. ಅವರ ಮನಸ್ಸಿಗೆ ಸರಿಯಾಗಿ ನಡಕೊಳ್ಳಬೇಕು. ಅದು ನಿನ್ನ ಕರ್ತವ್ಯ."

"ನಾನು ಮಾಡಿದುದೊಂದೂ ಅವರಿಗೆ ಸರಿಬೀಳದು ಎಂದಾದರೆ ಏನೆಸಗಲಿ? ಈ ಜನ್ಮದಲ್ಲಿ ನಮ್ಮಿಬ್ಬರಿಗೆ ಸರಿಬೀಳುವ ಸಂಭವ ನನಗೆ ಕಂಡುಬರುವುದಿಲ್ಲ."

"ಏನೋ ಬರುವಾಗಲೇ ನಿನ್ನ ಮತ್ತು ಮಗಳ ಮುಖ ನೋಡುವಾಗಲೇ ಒಂದು ರೀತಿ ಕಂಡಿತು. ಆದ್ದರಿಂದಲೇ ಇಷ್ಟರ ವರೆಗೆ ಮನೆ ಸುದ್ದಿ ಎತ್ತದೆ ಇದ್ದೆ. ತಂದೆ ಮಕ್ಕಳೊಳಗೆ ಏನಾದರೂ ಗಲಾಟೆ ಗಿಲಾಟೆ ಆಗಿಲ್ಲವಷ್ಟೆ. ಎಲ್ಲರೂ ಚಂದವಾಗಿರುವಿರಷ್ಟೆ" ಎಂದು ತುಸು ಆತಂಕಗೊಂಡವರಂತೆ ಶಂಭು ಭಟ್ಟರು ಪ್ರಶ್ನಿಸಿದರು.

"ಹೂಂ. ಏನೋ ನಮ್ಮೊಳಗೆ ಹಾವು ಮುಂಗುಸಿಗಳ ಹಾಗಾಗುತ್ತದೆ. ಅಲ್ಲನಲ್ಲದ ಅಪವಾದ ಬೈಗಳು ಕೇಳಿ ಕೇಳಿ ಸಾಕಾಯಿತು. ತಿರಿದುಂಡರೂ ಚಿಂತಿಲ್ಲ. ಆ ನರಕವಾಸ ಬೇಡ ಎಂದು ನಾನೂ ಲಲಿತೆಯೂ ಹೊರಟು ಬಂದಿದ್ದೇವೆ. ನಾನು ಹೇಳಿದರೆ ನಿಮಗೆ ನಿಜವೆಂದು ನಂಬಿಗೆ ಬರಲಿಕ್ಕಿಲ್ಲ. ನಿಮ್ಮ ಮಗಳು ಲಲಿತೆಯೊಡನೆಯೇ ಕೇಳಿ ತಿಳಿಯಿರಿ. ಆ ಹಾಳುಹರಟೆ ಹೇಳಿ ನಿಮ್ಮ ಮನಸ್ಸಿಗೆ ನಾನೇಕೆ ಬೇಜಾರ ಹುಟ್ಟಿಸಬೇಕು ಎಂದು ನುಡಿದು ಕೃಷ್ಣ ಭಟ್ಟರು ಶಂಭು

ಭಟ್ಟರು ಒತ್ತಾಯಿಸಿ ಕೇಳುವಂತೆ ಮಾಡಲಿಕ್ಕಾಗಿ ಗಂಭೀರ ಮುಖ ಮುದ್ರೆ ತಾಳಿದರು.

"ಬೇಜಾರ ಗೀಜಾರ ಏನು? ನನ್ನ ಮಗಳ ಕೈ ಹಿಡಿದವ ನೀನಾಗಿರಲು ನಿನ್ನ ಸುಖದುಃಖದ ವಿಚಾರ ನನ್ನ ಸುಖದುಃಖದ ಹಾಗೆಯೇ ಆಯಿತಲ್ಲ. ಮಗಳ ಶ್ರೆಯೋಭಿವೃದ್ಧಿಗೆ ಕಾರಣ ನೀನಾಗಿರಲು ನಿನ್ನ ನುಡಿಗಳಿಗಿಂತ ಮಗಳ ಮಾತುಗಳ ಮೇಲೆ ನಂಬಿಗೆ ಬರಲೇನವಕಾಶ. ನನ್ನನ್ನು ಅನ್ಯನೆಂದು ಭಾವಿಸದಿರು. ಇದ್ದುದನ್ನು ಇದ್ದಂತೆ ನಡೆದಂತೆ ನುಡಿದರೆ ಯೋಗ್ಯವಿಚಾರ ತಕ್ಕೊಳ್ಳಬಹುದು. ಏನಾಯಿತು? ಏನೆಲ್ಲಾ ಕತೆ ನಡೆಯಿತು? ಎಂಬುದನ್ನು ಚಾಚೂ ತಪ್ಪದೆ ತಿಳಿಸು." ಎಂದು ಶಂಭುಭಟ್ಟರು ಒತ್ತಾಯ ಮಾಡಿದರು.

ಕೃಷ್ಣಭಟ್ಟರು ಮನೆಯಲ್ಲಿ ನಡೆದ ಸಂಗತಿಗಳನ್ನೆಲ್ಲಾ ಚಾಚೂ ತಪ್ಪದೆ ಉಪ್ಪು ಕಾರ ಹಚ್ಚಿ ಒಂದಕ್ಕೆರಡು ಕೂಡಿಸಿ ಶಂಭುಭಟ್ಟರಿಗೆ ವಿಸ್ತಾರವಾಗಿ ವರ್ಣಿಸಿ ಹೇಳಿದರು. "ನಾನು ಮತ್ತು ಲಲಿತೆ ಯಾರ ಗೋಜಿಗೂ ಹೋಗುವುದಿಲ್ಲ. ಯಾವ ವಿಷಯವೂ ನಮಗರಿಯದು. ಆದರೂ ಮನೆಯವರಿಗೆ ನಮ್ಮ ಮೇಲೆ ವಕ್ರದೃಷ್ಟಿ. ಮನೆಯಲ್ಲಿ ಪದ್ಮನಾಭ ತಂದೆ ತಾಯಿಗಳಿಗೆ ಪ್ರೀತಿಪಾತ್ರ. ಅವನೆಸಗಿದುದೆಲ್ಲಾ ಸರಿ. ಅವನ ಮೇಲವರಿಗೊಂದಿಷ್ಟೂ ಸಂಶಯವಿಲ್ಲ. ಸಂಶಯವೆಲ್ಲಾ ಸಾಧುಗಳಾದ ನಮ್ಮ ಮೇಲೆ. ಹಣ ಕಾಣೆಯಾಗಿದೆಯಂತೆ. ಅಪಹರಿಸಿದವ ನಾನೆಂಬ ಆರೋಪ. ಬಾಯಿಬಿಟ್ಟು ಸ್ಪಷ್ಟ ನೀನೇ ಕದ್ದುದೆಂದು ಮಾತ್ರ ಹೇಳಿಲ್ಲ. ಪದ್ಮನಾಭ ತೆಗೆದಿರಬೇಕು. ಬೆಕ್ಕು ಬೆಣ್ಣೆ ಮೆದ್ದ ಹಾಗೆ ಅವನ ಸಂಗತಿ ಯಾರೂ ತಿಳಿಯಲಾರರು. ಸಿಕ್ಕಾಬಟ್ಟೆ ಬಾಯಿಗೆ ಬಂದಂತೆ ಏನೆನ್ನಬಹುದು ಏನೆನ್ನಬಾರದು ಎಂಬ ಪರಿವೆಯಿಲ್ಲದೆ ಹೆತ್ತವರು ಬೈದುಬಿಟ್ಟರು. ಮರ್ಯಾದೆ ಇದ್ದವರಿಗೆ ಅವರೊಂದಿಗೆ ಸರಿಹೋಗದು. ನಾನೂ ಪ್ರತಿ ನುಡಿದೆ. ಸಹಿಸದೆ ನನ್ನ ಪಾಲುನನಗಿತ್ತು ಬಿಡಿರಿ. ನಿಮ್ಮ ರಗಳೆಯೇ ಬೇಡವೆಂದೆ. ಎಲ್ಲಾ ನನ್ನ ಸ್ವಂತದ್ದು. ಚಿಕ್ಕಾಸು ಸಹ ನಾನಿರುವಾಗ ನಿನಗೆ ಸಿಗದು. ನನ್ನ ಕಾಲಾನಂತರವೂ ಒಂದು ಕಡ್ಡಿ ಸಹ ನಿನಗೆ ಸಿಗದಂತೆಸಗುವೆ ಎಂದು ತಂದೆಯು

ವರು ಕಠೋರವಾಗಿ ನುಡಿದರು. ಸಿಗುವುದೋ ಇಲ್ಲವೋ ನೋಡಿಯೇ ಬಿಡುವೆನೆಂದು ಹೇಳಿ ಹೊರಟು ಬಂದೆ. ಇನ್ನು ಮೇಲೆ ಮುಂದಿನ ದಾರಿ ನೋಡಬೇಕು". ಎಂದು ಕೃಷ್ಣ ಭಟ್ಟರು ಸಂಗತಿಯನ್ನೆಲಾ ಹೇಳಿದರು.

ಈ ಮಾತುಗಳನ್ನೆಲ್ಲಾ ಕೇಳುತಿದ್ದಂತೆಯೇ ಶಂಭು ಭಟ್ಟರ ಮುಖ ಕಪ್ಪಿಟ್ಟಿತು. "ಅನರ್ಥ ಇಷ್ಟರ ವರೆಗಾಗಿರಬಹುದೆಂದು ನಾನೆಣಿ ಸಿರಲಿಲ್ಲ. ವಿಪರೀತ ದುಡುಕಿ ಬಿಟ್ಟೆಯಲ್ಲ. ನೋಡು ನೀನು ಹೀಗೆ ದುಡುಕಿದರೆ ಭವಿಷ್ಯಕ್ಕೆ ಕೇಡು. ಮಗಳನ್ನಿತ್ತ ನಾನು ನಿನಗೆ ತಂದೆ ಗಿಂತಲೂ ಮಿಗಿಲು. ನಿನ್ನ ಹಿತಕ್ಕೆ ನಾನು ನುಡಿಯುತ್ತಿರುವೆನು. ನಿನ್ನ ತಂದೆಯವರಿಗೆ ಈಗ ಮುದಿಪ್ರಾಯ. ಇನ್ನು ಹೆಚ್ಚು ಸಮಯ ಅವರಿರಲಾರರು. ಅವರ ನಂತರ ನೀನೇ ಇಡೀ ಅವರ ಆಸ್ತಿ ಮತ್ತು ಹಣದ ಸರ್ವಾಧಿಕಾರಿಯಾಗಲಿರುವಾಗ ಹೀಗೆ ಮಾಡಬಾರದು. ಈಗವ ರಿಂದ ಪಾಲು ಪಡೆದರೂ ಒಂದು ಸ್ವಲ್ಪ ಮಾತ್ರ ನಿನಗೆ ದೊರಕು ವುದು. ದುಡುಕಿ ಹಿಶೆ ಪಡೆದೆಯಾದರೆ ಇಡೀ ಆಸ್ತಿಗೆ ಸರ್ವಾಧಿಕಾರಿ ಯಾಗುವವ ಗೇಣುದ್ದ ಜಮೀನಿನ ಒಡೆಯನಾಗಬೇಕು. ಅಂಗೈಗೆ ಬರಲಿರುವುದನ್ನು ಮುಂಗೈಯಿಂದ ತಟ್ಟಿ ಕಳೆಯಬಾರದು" ಎಂದು ಮೊದಲಾಗಿ ಶಂಭು ಭಟ್ಟರು ಕೃಷ್ಣ ಭಟ್ಟರನ್ನು ಸಾಂತ್ವನಗೊಳಿಸ ತೊಡಗಿದರು.

ಶಂಭು ಭಟ್ಟರ ಹಿತದ ನುಡಿಗಳು ಕೃಷ್ಣ ಭಟ್ಟರಿಗೆ ಹೌದೆನೆಸಿ ದುವು. "ಆದರೆ ಈ ಮನೆಗಿನ್ನು ಕಾಲಿಡಲಾರೆ"ನೆಂದು ಶಪಥ ಹಾಕಿ ಹೊರಟವನು ಇನ್ನೆಂತು ಅವರ ಬಳಿ ಸಾರುವೆನು? ಮುಖ ತೋರಿಸು ವೆನು?" ಎಂದು ಶಂಭು ಭಟ್ಟರಿಗೆ ಪ್ರಶ್ನೆ ಹಾಕಿದರು.

"ತಂದೆ ಮಕ್ಕಳ ಜಗಳದಲ್ಲಿ ಹುರುಳೇನಿದೆ? ಅದು ಕ್ಷುಲ್ಲಕ. ಏನೂ ತೊಂದರೆಯಿಲ್ಲ. ನಾನು ಹೋಗಿ ವಾಸುದೇವ ಭಟ್ಟರನ್ನು ಸಮಜಾಯಿಸಿ ಬರುತ್ತೇನೆ. ಅನಂತರ ನೀನು ಹೋಗಿ ತಂದೆ ತಾಯಿಗಳ ಪಾದಕ್ಕೆ ನಮಸ್ಕರಿಸಿ ಮನೆಯೊಳಗೆ ಸೇರಿಕೋ. ಮನೆ ಬಿಟ್ಟರೆ ಕೆಟ್ಟೆ,"

ಎಂದರು ಶಂಭು ಭಟ್ಟರು. "ಹೂಂ" ಎಂದು ಕೃಷ್ಣ ಭಟ್ಟರು ಮಾವನ ಮನೆಯಲ್ಲಿ ವಿಶ್ರಮಿಸಿಕೊಂಡರು.

ಕೃಷ್ಣ ಭಟ್ಟರೊಡನಂದಂತೆ ಶಂಭು ಭಟ್ಟರು ಮರುದಿನ ವಾಸುದೇವ ಭಟ್ಟರಲ್ಲಿಗೆ ಬಂದರು. ಉಪಚಾರ ಕಳೆದನಂತರ ಯೋಗ ಕ್ಷೇಮ ವಿಚಾರಗಳಾದುವು. ಮಾತನಾಡುತ್ತ ಕೃಷ್ಣ ಭಟ್ಟರ ಪ್ರಸ್ತಾಪವೂ ಬಂತು. ವಾಸುದೇವ ಭಟ್ಟರೂ ಗಂಗಮ್ಮನೂ ಕಣ್ಣೀರು ಸುರಿಸಿ ಕೃಷ್ಣ ಭಟ್ಟರ ಸುದ್ದಿ ಹೇಳಿದರು. "ಹಿರಿಯ ಮಗನೆಂದು ಮಮತೆಯಿಂದ ಸಾಕಿ ಸಲಹಿದೆವು. ಎರಡಕ್ಷರ ಕಲಿತು ದೊಡ್ಡ ಉದ್ಯೋಗ ಸಂಪಾದಿಸಲಿ ಎಂದು ಉಚ್ಚ ಶಿಕ್ಷಣಕ್ಕಾಗಿ ಪೇಟೆಯ ದೊಡ್ಡ ಶಾಲೆಗೆ ಕಳುಹಿದೆವು. ಅಲ್ಲಿ ವಿದ್ಯೆಕಲಿಯದೆ ದುರ್ಬುದ್ಧಿ ಕಲಿತ ಶಾಲೆ ಬಿಟ್ಟು ಬಂದವನನ್ನು ಸರಿದಾರಿಗೆ ತರಲು ಪಟ್ಟಶ್ರಮಗಳೆಲ್ಲಾ ವ್ಯರ್ಥವಾದುವು. ಅಡ್ಡದಾರಿ ಹಿಡಿದು ದುರ್ವ್ಯಸನಗಳಿಗೆ ಬಲಿಬಿದ್ದ. ತಿಂದು ತಿರುಗಿ ಸೋಮಾರಿಯಾಗಿ ಕಾಲ ಕಳೆಯುವುದಲ್ಲದೆ ಇದ್ದುದನ್ನೆಲ್ಲಾ ಹಾಳು ಮಾಡುತ್ತಾನೆ. ತಲೆ ಮೆಟ್ಟಿ ಹಾರುತ್ತಾನೆ. ಸಾಕಿ ಸಲಹಿದ ಗುರುತು ಸಹ ಇಲ್ಲ. ಉದ್ಧಟವೃತ್ತಿಯಿಂದ ಹೆತ್ತವರು ಬುದ್ಧಿಗೆರಡು ನುಡಿ ನುಡಿದಾಗ ರೇಗಿ ಮನೆಬಿಟ್ಟು ಹೊರಟಿದ್ದಾನೆ. ಸಾಕೋ ಸಾಕು. ಇನ್ನು ಈ ಕಣ್ಣುಗಳಲ್ಲಿ ಏನೆಲ್ಲಾ ನೋಡಬೇಕೋ?" ಎಂದು ಮರುಕ ದಿಂದ ಎದೆಕರಗಿ ನುಡಿದರು.

"ಒಟ್ಟಾರೆ ನಮ್ಮ ನಮ್ಮ ಅದೃಷ್ಟವೆನ್ನಬೇಕು. ಶನಿಗ್ರಹಚಾರ ವಾಗಿರಬೇಕು. ಆದಷ್ಟು ಜಾಗ್ರತೆವಹಿಸಿ ಸರಿದಾರಿಗೆ ಬರುವಂತೆ ಮಾಡಬೇಕು. ಎಷ್ಟೆಂದರೂ ನಾವಿರುವವರೆಗಾದರೂ ಮಾನವಂತರಾಗಿ ಬಾಳಬೇಕಲ್ಲ. ಹೀಗೆ ನೀವು ಬಿಟ್ಟುಬಿಟ್ಟರೆ ನಾಳೆ ಒಸೆಗೆ ವ್ಯಾಜ್ಯಹೂಡಿಯಾನು. ಈ ಜಗಳದಿಂದಾಗಿ ಊರೆಲ್ಲಾ ಹೊಲಸಾಗುವುದು. ಇನ್ನು ಮೇಲೆ ಬದುಕಿದಷ್ಟುದಿನ ನಾವು ಬದುಕವಂತಿಲ್ಲ. ಜೀವಿಸಿರುವಷ್ಟರವರೆ ಗಾದರೂ ನಾತ ಹೊರಡದಂತೆ ಮಾಡಲೇಬೇಕಲ್ಲ. ಇಂದಲ್ಲವಾದರೆ ನಾಳೆ ಗಾದರೂ ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದವನಾದುದರಿಂದ ಬುದ್ಧಿ ಬಾರದಿ

ದ್ದೀತೇ? ನಮ್ಮಲ್ಲಿಗೆ ಬಂದು ಎಲ್ಲಾ ಹೇಳಿದ. ತಂದೆ ತಾಯಿಗಳೊಂದಿಗೆ ಕೋಪಿಸಬಾರದೆಂದು ಬುದ್ಧಿಹೇಳಿದ್ದೇನೆ. ಈಗವನಿಗೆ ಸಿಟ್ಟುಮಾಡಿ ಹೊರಡಬಾರದಿತ್ತೆಂದು ಹೇಳಿದೆ. ನೀವು ಬಾ ಎಂದರೆ ಸಾಕು. ಕರು ತಾಯ ಬಳಿಗೆ ಬರುವಂತೆ ಓಡಿ ಬಂದಾನು" ಎಂದು ಶಂಭು ಭಟ್ಟರೂ ಹೇಳಿದರು. "ನಾನೇನೂ ಹೋಗೆಂದು ದೂಡಿಲ್ಲ. ಕೆಟ್ಟನಡತೆ ಸಲ್ಲ ದೆಂದು ಬುದ್ಧಿಗಾಗಿ ಬೈದೆ. ಬರುವುದಿದ್ದರೆ ಬರಲಿ. ನಮ್ಮಿಂದೇನೂ ಅಡ್ಡಿಯಿಲ್ಲ. ಚಕಾರಶಬ್ದವೆತ್ತುವಂತೆ ಇಲ್ಲ. ನೀವೂ ಚೆನ್ನಾಗಿ ಬುದ್ಧಿ ಹೇಳಿ ಕರಕೊಂಡು ಬನ್ನಿರಿ" ಎಂದರು ವಾಸುದೇವ ಭಟ್ಟರು.

ನಂಟರಿಷ್ಟರ ಉಪಚಾರಗಳು ಕಳೆದನಂತರ ಶಂಭು ಭಟ್ಟರು ತಮ್ಮ ಮನೆಗೆ ಹೊರಟುಬಂದರು. ಮಗಳಿಗೂ ಅಳಿಯನಿಗೂ ಕೆಲ ವೊಂದು ಹಿತೋಕ್ತಿಗಳನ್ನಾಡಿ ಅವರನ್ನು ವಾಸುದೇವ ಭಟ್ಟರಲ್ಲಿಗೆ ಕರಕೊಂಡುಬಂದರು. ಕೃಷ್ಣ ಭಟ್ಟರೂ ಲಲಿತೆಯೂ ವಾಸುದೇವ ಭಟ್ಟರ ಮತ್ತು ಗಂಗಮ್ಮನ ಪಾದ ಮುಟ್ಟಿ ನಮಸ್ಕರಿಸಿದರು. ವಾಸು ದೇವ ಭಟ್ಟರ ಮತ್ತು ಗಂಗಮ್ಮನ ಕಂಠ ಗದ್ಗದವಾಯಿತು. ಗಂಗಮ್ಮ ಕೂಡಲೇ ದೇವರ ಕೋಣೆಯಲ್ಲಿ ತೆಂಗಿನೆಣ್ಣೆಯ ದೀಪ ಹಚ್ಚಿ ಇರಿಸಿದಳು. ಎಲ್ಲರೂ ದೇವರ ಕೋಣೆಗೆ ಹೋದರು. "ಏನೋ ವಿಷಗಳಿಗೆಯಲ್ಲಿ ಎರಡು ಮಾತು ಬಂದು ಹೀಗೆಲ್ಲಾ ಆಯಿತು. ಗ್ರಹಚಾರದೋಷ ವಾಗ್ದೋಷಗಳನ್ನು ಪರಿಹರಿಸಿ ಇನ್ನುಮುಂದೆ ಒಳ್ಳೆಯದಾಗಿ ನಡೆಯಿಸಿ ಕೊಂಡುಬರುವ ಭಾರ ದೇವರ ಶ್ರೀ ಪಾದಗಳಿಗೆ ಸೇರಿದುದು" ಎಂದು ಶಂಭು ಭಟ್ಟರು ಕೈಜೋಡಿಸಿ ಪ್ರಾರ್ಥನೆ ಮಾಡಿದರು. ಎಲ್ಲರೂ ದೀಪದೆದುರು ದೇವರಿಗೆ ಅಡ್ಡಬಿದ್ದರು. ಕಿರಿಯರು ಹಿರಿಯರಿಗೆ ನಮಸ್ಕರಿಸಿದರು. ಹಿರಿಯರು ಆಶೀರ್ವದಿಸಿದರು. ದೇವರಿಗೆ ಕಾಣಿಕೆ ಮಾಡಿದರು. ಒಂದು ಬಗೆಯ ಆನಂದ ಎಲ್ಲರಲ್ಲೂ ಮೂಡಿತು. ಎಲ್ಲರೂ ಹೊರಬಂದರು. ನಂಟರಿಷ್ಟರು ಆನಂದ ಸಂಭ್ರಮದಲ್ಲಿ ಮಾತನಾಡುತ್ತಾ ಅಂದಿನ ದಿನ ಕಳೆದರು. ಮರುದಿನ ಶಂಭು ಭಟ್ಟರು ಬೀಳ್ಕೊಟ್ಟವರಾಗಿ ತಮ್ಮೂರಿಗೆ ತೆರಳಿದರು.

## ಸುಳಿ ೬.

ಇದಾಗಿ ಕೆಲವು ಸಮಯಗಳ ವರೆಗೆ ಕೃಷ್ಣ ಭಟ್ಟರೂ ಬಾಕಿ ಯುಳಿದ ಮನೆಮಂದಿಯವರೂ ಒಮ್ಮತದಿಂದಿದ್ದರು. ಕೃಷ್ಣ ಭಟ್ಟರೂ ಲಲಿತೆಯೂ ಉಳಿದವರೊಂದಿಗೆ ಸಹಕರಿಸುತಿದ್ದರು. ತುಸುಮಟ್ಟಿಗೆ ಭೇದ ಕಾಣುತ್ತಿದೆ. ಒಳ್ಳೆಯವನಾದಾನೆಂಬ ಆಸೆಯುಕುಡಿ ವಾಸುದೇವ ಭಟ್ಟರಿಗೂ ಗಂಗಮ್ಮನಿಗೂ ಚಿಗುರಿತು. ಆದರೆ "ನಾಯಿಯ ಬಾಲ ನಳಿಗೆಯಲ್ಲಿ ಹಾಕಿದ ಹಾಗೆ" ಎಂದಿದೆಯಲ್ಲ. ಈ ಬದಲಾವಣೆ ಹಿಂದಿನ ಗಲಾಟೆ ಸ್ವಲ್ಪಮಟ್ಟಿಗೆ ಹಳತಾಗಿಹೋಗುವವರೆಗಾಯಿತು. ಸ್ವೇಚ್ಛಾ ಚಾರ ದುರಭ್ಯಾಸಗಳು ಕೃಷ್ಣ ಭಟ್ಟರನ್ನು ಬಿಟ್ಟುಕೊಡಲೊಪ್ಪಲಿಲ್ಲ. ಪೆಟ್ಟಿಗೆಯ ಬೀಗದಕೈ ವಾಸುದೇವ ಭಟ್ಟರ ಸೊಂಟದಲ್ಲಾದುದರಿಂದ ಹಣ ಕೃಷ್ಣ ಭಟ್ಟರಿಗೆ ಸಿಗದಾಯಿತು. ಬಾಳೆಕಾಯಿ ತೆಂಗಿನಕಾಯಿ ಅಡಿಕೆ ಮೊದಲಾದ ಸಾಮಾನುಗಳನ್ನು ಮನೆಯವರರಿಯದಂತೆ ಹತ್ತಿರದ ಅಂಗಡಿಗೆ ಸಾಗಿಸಿ ಹಣಪಡೆದು ದುರಭ್ಯಾಸಗಳನ್ನು ಸಾಕಿಸಲಹತೊಡಗಿ ದರು. ನೆರೆಯಲ್ಲಿರುವ ಬಟ್ಯಪ್ಪ ಕೃಷ್ಣ ಭಟ್ಟರೊಂದಿಗೆ ಸಹಕರಿಸಿದ. ಸಹಕರಿಸಿದುದರಿಂದ ಅವನಿಗೂ ಆದಾಯವಿತ್ತು. ಮೊದಮೊದಲು ವಾಸು ದೇವ ಭಟ್ಟರಿಗರಿಯದಾದರೂ ಕ್ರಮೇಣ ತಿಳಿಯತೊಡಗಿತು. ಆದರೆ ಕಳ್ಳರೆಂದು ಯಾರನ್ನು ಶಿಕ್ಷಿಸುವುದು? ಮೇಲೆ ನೋಡಿ ಉಗುಳಿದರೆ ಫಲವೇನಾಗುವುದು ಎಂದು ಕಣ್ಣುಮುಚ್ಚಿ, ಕಂಡರೂ ಕಾಣದಂತೆಸಗಿ ದರು. ಮೌನವಾಗಿ ತಾಳಿಕೊಳ್ಳತೊಡಗಿದರು. ಈ ಮುದಿ ತಂದೆ ಇರುವ ವರೆಗೆ, ಕಣ್ಣುಮುಚ್ಚುವವರೆಗೆ ಖುಶಿ ಬಂದಂತೆ ವರ್ತಿಸ ಲಾಗುವುದಿಲ್ಲವಲ್ಲ ಎಂದು ಕೃಷ್ಣ ಭಟ್ಟರು ಒಳಗೊಳಗೆ ಹಲ್ಲುಕಡಿಯು ತ್ತಿದ್ದರು.

ವಾಸುದೇವ ಭಟ್ಟರ ಜಮೀನಿನ ಸುತ್ತಲೂ ಗುಡ್ಡಕಾಡುಗಳಿದ್ದುವು. ಅವುಗಳಲ್ಲಿ ಗೇರುಬೀಜ ಧಾರಾಳ ಬೆಳೆಯುತ್ತಿತ್ತು. ಗೇರುಬೀಜದ ಕಾಡನ್ನು ಪೂರೈಸುವುದಿಲ್ಲವೆಂದು ವಾಸುದೇವ ಭಟ್ಟರು ಗೇಣಿಗೆ ಕೊಡು ತ್ತಿದ್ದರು. ಈಗದು ತನ್ನ ಗೆಳೆಯ ಬಟ್ಯಪ್ಪನಿಗೆ ಗೇಣಿಗೆ ಸಿಕ್ಕುವಂತೆ ಕೃಷ್ಣ

ಭಟ್ಟರೆಸಗಿದರು. ಗೇರು ಹಣ್ಣಾಗತೊಡಗಿತು. ಕೃಷ್ಣ ಭಟ್ಟರು ಆಗಾಗ ಬಟ್ಯಪ್ಪ ಗೇರುಬೀಜ ಕೊಯ್ಯುತ್ತಿರುವಲ್ಲಿಗೆ ಬರುತ್ತಿದ್ದರು. ಕೃಷ್ಣ ಭಟ್ಟರಿಗೆ ಗೆಳೆಯರ ತಂಡ ಬೆಳೆಯಿತು. ಬಟ್ಯಪ್ಪ, ತ್ಯಾಂಪು, ಚಂಗರ, ದೂಮಪ್ಪ ಸೆಟ್ಟಿ, ಕೃಷ್ಣ ಭಟ್ಟರೇ ಮೊದಲಾದ ಗೆಳೆಯರು ಪ್ರತಿದಿನವೂ ಒಟ್ಟುಗೂಡಿ ಗೇರುಬೀಜದ ಕಾಡಿನಲ್ಲಿ ಮರದಡಿಯ ನೆರಳಲ್ಲಿ ಇಸ್ಪೀಟೆಲೆ ಹರಡುತ್ತಿದ್ದರು, ಹರಟೆಹೊಡೆಯುತ್ತಿದ್ದರು. "ಗೇರುಬೀಜದ ಹಣ್ಣಿನಿಂದ ಉತ್ತಮ ತರಗತಿಯ ಆಸವ ತಯಾರಿಸಲಿಕ್ಕಾಗುತ್ತದೆ. ನಾವು ತಯಾರಿಸಿ ಸೇವಿಸುವ. ಸುಮ್ಮಗೆ ಬೆಲೆತೆತ್ತು ಸೇವಿಸುವುದು ಬೇಡ. ಗಂಗಸರಕ್ಕೆ ಸರಿಸಮಾನವಾದ ಸರಾಯಿ ಇನ್ನೊಂದಿಲ್ಲ, ಮಾಡುವ" ಎಂದು ಗೆಳೆಯರು ನಿಶ್ಚಯಿಸಿ ಗೇರುಹಣ್ಣು ಕೊಳೆಯಿಸಿ ಸರಾಯಿ ತಯಾರಿಸಿ ಸೇವಿಸಲುಪಕ್ರಮಿಸಿದರು. ಕೃಷ್ಣ ಭಟ್ಟರಿಗೂ ಅದರ ಚಟ ಹಿಡಿಯಿತು. ರಾತ್ರಿಹೊತ್ತಿನಲ್ಲಿ ಗೇರುಹಣ್ಣಿನ ಸರಾಯಿ ಗೆಳೆಯರೊಟ್ಟುಕೂಡಿ ತಯಾರಿಸುತ್ತಿದ್ದರು. ಕೃಷ್ಣ ಭಟ್ಟರೂ ಒಮ್ಮೊಮ್ಮೆ ನಡು ರಾತ್ರಿಯಲ್ಲಿ ಮನೆಯವರರಿಯದಂತೆ ಅಲ್ಲಿಗೆ ಸಾಗುತ್ತಿದ್ದರು, ಅವರೊಂದಿಗೆ ಸಹಭಾಗಿಗಳಾಗುತ್ತಿದ್ದರು. ಪ್ರಜ್ಞೆ ತಪ್ಪುವತನಕವೂ ಕೆಲವೊಮ್ಮೆ ಸೇವಿಸುತ್ತಿದ್ದರು. ಅವರ ಕಣ್ಣುಗಳು ಕೆಂಪುಕೆಂಪಾಗುತ್ತಿದ್ದುವು. ಈ ರೀತಿ ಕುಡುಕರೊಂದಿಗೆ ಸೇರಿ ಜುಗಾರಾಡುವುದು, ಸರಾಯಿ ಕುಡಿಯುವುದು, ಹರಟೆಹೊಡೆಯುವುದು ಮೊದಲಾದುವೇ ಕೃಷ್ಣಭಟ್ಟರ ದಿನನಿತ್ಯದ ಪ್ರಮುಖ ಕೆಲಸಗಳಾದುವು.

ಊರಲ್ಲಾಗಲಿ ನೆರೆಯೂರಲ್ಲಾಗಲಿ ಎಲ್ಲಿಯಾದರೂ ಸರಿ. ಜಾತ್ರೆಗಳೂ ಬಯಲಾಟಗಳೂ ಆಗುವುದಿದ್ದರೆ ಈ ಕುಡುಕರ ತಂಡ ಅಲ್ಲಿಗೆ ಸಾಗುತ್ತಿತ್ತು. ಇವರಿಲ್ಲದ ಜಾತ್ರೆಯಾಗಲಿ ಬಯಲಾಟವಾಗಲಿ ಮತ್ತೊಂದಾಗಲಿ ಸುತ್ತಿನ ಹನ್ನೆರಡು ಮೈಲುಗಳೊಳಗೆ ಒಂದಾದರೂ ಇರುತ್ತಿರಲಿಲ್ಲ. ಜಾತ್ರೆ ನೋಡುವುದಾಗಲಿ, ಬಯಲಾಟ ನೋಡುವುದಾಗಲಿ ಇವರ ಉದ್ದೇಶ ಅಲ್ಲ. ಬಂದ "ಉಂಡೆಕ್ಕಳಿ"ಯೆಂಬ ಜುಗಾರಾಟದಲ್ಲಿ ಭಾಗವಹಿಸಿ ದರ್ಪ ರೀತಿ ತೋರಿಸಿ ಹಣ ಕಳೆಯುವುದು ಇವರ ಪ್ರಮುಖ ವ್ಯಾಪಾರ. ಕೃಷ್ಣ ಭಟ್ಟರ ಈ ಗೆಳೆಯರು ಹಣ

ಕೈಯಲ್ಲಿಲ್ಲದಾಗ ಒಮ್ಮೊಮ್ಮೆ ಕದಿಯಲೂ ಹೋಗುತ್ತಿದ್ದರು. ಕದ್ದು ಸಿಕ್ಕಿಬೀಳದ ಜಾಣ್ಮೆ ಅವರಿಗಿತ್ತು. ಊರವರಾರನ್ನೂ ಅವರು ಗೌರವಿಸುತ್ತಿರಲಿಲ್ಲ. ಕೆಲವೊಮ್ಮೆ ಆ ಕುಡುಕರು ಹಣವಿಲ್ಲದಾಗ ಊರವರೊಡನೆ ಸಾಲಕೇಳುತ್ತಿದ್ದರು. ಸಾಲಕೇಳಿದಾಗ ಕೊಡದಿದ್ದರೆ ಸಾಧುಗಳನ್ನು ಹೆದರಿಸಿ ವಸೂಲುಮಾಡುತ್ತಿದ್ದರು. ಹೀಗಾದುದರಿಂದ ಊರವರಿಗೆಲ್ಲ ಇವರ ಮೇಲೆ ವಕ್ರದೃಷ್ಟಿಯಿತ್ತು. ಆದುದರಿಂದ ಇವರು ಕದ್ದು ಸರಾಯಿ ತಯಾರಿಸಿ ಕುಡಿಯುತ್ತಿರುವರೆಂದು ತಿಳಿ ಅರ್ಜಿ ಅಬ್ಕಾರಿ ಇಲಾಖೆಗೆ ತಲಪಿತು.

ಒಂದು ದಿನ ಬೆಳಕು ಹರಿಯಲಾಗಿತ್ತು. ಕುಡುಕರು ಸರಾಯಿ ಕಾಯಿಸಿ ಕುಡಿದು ಅಲ್ಲೇ ಒರಗಿದ್ದರು. ಅಕಸ್ಮಾತ್ ಅಬ್ಕಾರಿ ಸಿಪಾಯಿಗಳು ಬಂದುಬಿಟ್ಟರು. ಸುಳಿವರಿತು ಇವರೆದ್ದೋಡುವ ಮೊದಲೇ ಪೋಲೀಸರು ಬಂದು ಎರಡೇಟು ಬಿಗಿದರು. ಕೆಲವರು ಅವಸರದಲ್ಲಿ ನುಸುಳಿ ಓಡಿಬಿಟ್ಟರು. ದೈವವಶಾತ್ ಕೃಷ್ಣ ಭಟ್ಟರು ಆಗ ಅಲ್ಲಿರಲಿಲ್ಲ. ಬಟ್ಯಪ್ಪನೂ ತ್ಯಾಂಪುವೂ ಸಿಕ್ಕಿಬಿದ್ದರು. ಗುದ್ದು ಬಿದ್ದಾಗ ಹೆದರಿಸಿ ಕೇಳಿದಾಗ ಸತ್ಯಾಂಶ ಹೊರಬಿತ್ತು. ಕೃಷ್ಣ ಭಟ್ಟರ ಜಾಗ. ಅವರಿಗೆ ಸಂಪರ್ಕಯೆಂದರಿತಾಗ ಪೋಲೀಸರು ಹಿರಿಹಿಗ್ಗಿದರು. ಬಟ್ಯಪ್ಪನನ್ನೂ ತ್ಯಾಂಪುವನ್ನೂ ಹಿಡಿದೆಳೆದುಕೊಂಡು ಪೋಲೀಸರು ವಾಸುದೇವ ಭಟ್ಟರಲ್ಲಿಗೆ ಬಂದರು. ದೂರದಿಂದ ಬರುವ ಇವರನ್ನು ಕಂಡೊಡನೆಯೇ ಕೃಷ್ಣ ಭಟ್ಟರಿಗೆಲ್ಲವೂ ತಿಳಿಯಿತು. ಸುದ್ದಿಲ್ಲದೆ ಮನೆಯೊಳಗೆ ನಡೆದು ದೇವರ ಕೋಣೆಯಲ್ಲಡಗಿ ಕುಳಿತರು. ವಾಸುದೇವ ಭಟ್ಟರು ತಲೆಗೆ ಮುಟ್ಟಾಳೆಯಿಟ್ಟು ಕೈಯಲ್ಲಿ ಕತ್ತಿ ಹಿಡಿದು ತೋಟಕ್ಕೆ ಹೊರಡಲನುವಾಗಿದ್ದರು. ಪೋಲೀಸರು ಬಂದೇ ಬಿಟ್ಟರು. "ವಾಸುದೇವ ಭಟ್ಟರೆಂದರೆ ಯಾರು? ನೀವೋ? ಕೃಷ್ಣ ಭಟ್ಟರು ನಿಮ್ಮ ಮಗನೇ? ಅವರು ಮನೆಯಲ್ಲಿದ್ದಾರೆಯೋ?" ಎಂದು ಪೋಲೀಸರು ಬಂದ ಕೂಡಲೆ ವಾಸುದೇವ ಭಟ್ಟರೊಡನೆ ಕೇಳಿದರು.

"ಹೌದು. ಯಾಕೆ? ಬನ್ನಿರಿ. ಕುಳಿತುಕೊಳ್ಳಿರಿ" ಎಂದು ಜಗಲಿಗೇರುತ್ತಾ ವಾಸುದೇವ ಭಟ್ಟರು ಸ್ವಾಗತಿಸಿದರು.

"ಯಾಕೆಗೀಕೆ ಮತ್ತೆ. ಕೇಳಿದುದಕ್ಕೆ ಉತ್ತರವೀಯಬೇಕು. ಉಪಚಾರ ಸ್ವಾಗತ ಮೊದಲಾದ್ದು ಬೇಕಾಗಿಲ್ಲ." ಎಂದವರ ಮುಖ್ಯಸ್ಥರು ಬಿರುಸಾಗಿ ನುಡಿದರು.

ಅನಿರೀಕ್ಷಿತವಾಗಿ ಈ ರೀತಿಯ ಬಿರುನುಡಿ ಕೇಳಿ ವಾಸುದೇವ ಭಟ್ಟರು ಬೆಪ್ಪಾದರು. ಆದರೂ "ಬನ್ನಿ ಸ್ವಾಮಿ, ಕುಳಿತುಕೊಳ್ಳಿರಿ, ಸಿಟ್ಟುಮಾಡಬೇಡಿರಿ" ಎಂದು ಅವರು ವಿನಯಪೂರ್ವಕ ನುಡಿದರು.

"ನಾವು ಬಂದುದು ಕುಳಿತು ಹರಟೆ ಹೊಡೆಯಲು ಅಲ್ಲ. ನಿಮ್ಮ ಮಗ ಕೃಷ್ಣ ಭಟ್ಟರನ್ನು ಹಿಡಕೊಂಡು ಹೋಗಿ ಲಾಕಪ್ಪಿಗೆ ಸೇರಿಸಲು ಬಂದಿರುವೆವು. ಬ್ರಾಹ್ಮಣರಾದರೂ ಈ ತೀಗೇಡಿಗಳೊಂದಿಗೆ ಸೇರಿ ಸರಾಯಿ ಕಾಯಿಸಿ ಕುಡಿಯುವ ಕೆಲಸ ನಿಮ್ಮ ಮಗನದು. ಎಲ್ಲಿರುವರವರು? ಬೇಗ ಹೇಳಿಬಿಡಿರಿ" ಎಂದರು ಪೋಲೀಸರು.

ವಾಸುದೇವ ಭಟ್ಟರಿಗೆ ಈಗೆಲ್ಲವೂ ತಿಳಿಯಿತು. ಅತ್ಯಂತ ಸಂಕಟವಾಯಿತು. ಆದರೂ ಮಾನವೆಂಬುದು ದೊಡ್ಡಿತಲ್ಲವೇ! "ನನ್ನ ಮಗ ಮಾವನ ಮನೆಗೆ ಹೋಗಿದ್ದಾನೆ" ಎಂದು ಸುಳ್ಳು ಹೇಳಿದರು.

"ಅಬ್ಬಾ! ಮುದುಕರಾದರೂ ಸುಳ್ಳು ಹೇಳುತ್ತಿರುವಿರಲ್ಲ. ನಿನ್ನೆ ಈ ಕುಡುಕರೊಂದಿಗಿದ್ದರೆಂದು ಇವರೊಪ್ಪಿಕೊಂಡಿರುವರು. ಅಡಗಿಸುತ್ತೀರಿ. ಇರಲಿ. ಸಾಕಷ್ಟು ರುಜುವಾತು ನಮಗುಂಟು. ನಿಮ್ಮನ್ನೇ ಹಿಡಕೊಂಡು ಹೋಗುತ್ತೇವೆ. ಇಂತಹ ಹೇಸಿಕೆಯ ದುರ್ವ್ಯಾಪಾರದ ಕೆಲಸಕ್ಕೆ ನಿಮ್ಮ ಹಾಗಿರುವವರು ಕೈಹಾಕಿದುದಕ್ಕೆ ತಕ್ಕ ಶಾಸ್ತಿಮಾಡುವೆ"ನೆಂದು ಪೋಲೀಸರ ಮುಖ್ಯಸ್ಥರು ಗರ್ಜಿಸಿದರು.

ವಾಸುದೇವ ಭಟ್ಟರು ಹೆದರಿ ಕಂಗಾಲಾದರು. "ನನಗೊಂದೂ ತಿಳಿಯದು. ನಾನು ಕಾಯಿಸಿದುದೂ ಇಲ್ಲ. ಕುಡಿದುದೂ ಇಲ್ಲ. ಕೊಂಡುಹೋಗುವಿರಾದರೆ ಹೋಗಿರಿ." ಎಂದರು ವಾಸುದೇವ ಭಟ್ಟರು. "ನೀವಲ್ಲದಿದ್ದರೆ ನಿಮ್ಮ ಮಗ, ಇದಕ್ಕೆಲ್ಲಾ ತಾಯಿ ಬೇರು. ಸರಕಾರಿ ಪ್ರೊಸಿಕ್ಯೂಷನ್ ಜಾರಿಮಾಡುತ್ತೇವೆ. ಒಳ್ಳೆಯ ಮಾತಿನಲ್ಲಿ ಅವರೆಲ್ಲಿ

ದ್ದರೂ ಹುಡುಕಿ ತಂದು ತೋರಿಸಿರಿ. ಇಲ್ಲವಾದರೆ ಅನರ್ಥವಾದೀತು." ಎಂದು ಪೋಲೀಸರು ಗಂಭೀರವಾಗಿ ನುಡಿದರು.

"ನಾನೇನು ಹೇಳಲಿ. ನೀವು ಸರಕಾರಿ ನೌಕರರು. ಏನೂ ಮಾಡಬಲ್ಲಿರಿ. ನನ್ನದೊಂದರಿಕೆ. ಹೇಗೂ ಆಗಲಿ. ನಮ್ಮದೊಂದು ಮರ್ಯಾದೆಯ ಮನೆತನ. ಅದರ ಗೌರವ ತೆಗೆದು ಬಿಡಬೇಡಿ." ಎಂದು ವಾಸುದೇವ ಭಟ್ಟರು ಕೈಜೋಡಿಸಿ ಹೇಳಿದರು.

"ಎಲ್ಲಾ ಮಾಡಬಹುದು. ಓ ಇತ್ತ ಬನ್ನಿ" ಎಂದು ವಾಸುದೇವ ಭಟ್ಟರನ್ನೊಂದು ಕಡೆ ಕರೆದು ಅಬ್ಕಾರಿ ಕಾನ್‌ಸ್ಟೇಬಲರು ಅವರ ಕಿವಿಯಲ್ಲಿ ಏನೋ ಸ್ವಲ್ಪ ಹೊತ್ತು ಗೊಣಗುಟ್ಟಿದರು.

"ಈಗಷ್ಟು ಹಣ ತಯಾರಿಲ್ಲವಲ್ಲ." ಎಂದು ವಾಸುದೇವ ಭಟ್ಟರು ಮುಖ ಕಿರಿದುಮಾಡಿ ಹೇಳಿದರು.

"ಒಂದು ಸ್ವಲ್ಪ ಕಡಿಮೆಯಾದರೂ ಚಿಂತಿಲ್ಲ. ಮುದುಕರಾದ ನಿಮ್ಮ ಗೌರವ ಕಾಪಾಡಬೇಕೆಂಬ ದೊಡ್ಡ ಮನಸ್ಸಿನಿಂದ ಹೇಳಿದುದು. ಇಲ್ಲವಾದರೆ ನಿಮ್ಮ ಮನೆತನದ ಗೌರವ ಸಂಪೂರ್ಣ ಹೋಯಿತೆಂದೇ ತಿಳಿದುಕೊಳ್ಳಿರಿ" ಎಂದು ಪೋಲೀಸರ ಮುಖ್ಯಸ್ಥರು ಕಠಿಣವಾಗಿ ನುಡಿದರು.

"ಆಯಿತು. ಬರುತ್ತೇನೆ" ಎಂದು ವಾಸುದೇವಭಟ್ಟರು ಮನೆಯೊಳಗೆ ಹೋದರು. ಪೆಟ್ಟಿಗೆ ಮುಚ್ಚಳ ತೆಗೆದು ನಾಲ್ಕು ಪಚ್ಚೆಯ ನೋಟುಗಳನ್ನು ಸುತ್ತಿ ಉಟ್ಟುಕೊಂಡರಿವೆಯಲ್ಲಿ ಮಡಚಿ ಸಿಕ್ಕಿಸಿಕೊಂಡರು. ಹೆಡ್‌ಕಾನ್‌ಸ್ಟೇಬಲರ ಬಳಿ ಸರಿದು ನೋಟುಗಳನ್ನು ಕಾಣದಂತೆ ಕೈಯಲ್ಲಿ ಮುಚ್ಚಿಹಿಡಿದು ಕೊಟ್ಟುಬಿಟ್ಟರು. ಬಂದ ಪೋಲೀಸರ ಮುಖ ಚೆನ್ನಾಗಿ ಅರಳಿತು. ಬಟ್ಯಪ್ಪನನ್ನೂ ತ್ಯಾಂಪುವನ್ನೂ ಬಿಟ್ಟುಬಿಟ್ಟರು. ವಾಸುದೇವ ಭಟ್ಟರೊಡನೆ "ಐದಾರು ಸೀಯಾಳ ಬಟ್ಯಪ್ಪನೊಡನೆ ಕೊಯಿದುತರಲು ಹೇಳಿರಿ" ಎಂದರು. ಬಟ್ಯಪ್ಪನೂ ತ್ಯಾಂಪುವೂ ಬದುಕಿದೆವೆನ್ನುತ್ತಾ ಸೀಯಾಳ ಕೊಯಿದುತಂದರು. ಸಿಪ್ಪೆಕೆತ್ತಿ ತೆಗೆದು ಪೋಲೀಸರ ಕೈಗಿತ್ತರು. ಪೋಲೀಸರು ಸೀಯಾಳ ಕುಡಿದರು. "ಇನ್ನು

ನಾವು ಹೋಗುವೆವು. ಥ್ಯಾಂಕ್ಸ್" ಎಂದುಸುರಿ ಪೋಲೀಸರು ನಡೆದೇ ಬಿಟ್ಟರು. ವಾಸುದೇವ ಭಟ್ಟರು ನಮ್ಮನ್ನೆಲ್ಲಿಯಾದರೂ ಬೈದು ಭಂಗಿಸು ವರೆಂದು ಬಟ್ಟೆಪ್ಪನೂ ತ್ಯಾಂಪುವೂ ಕೂಡಲೇ ಕಾಲುಕಿತ್ತರು.

ಪೋಲೀಸರು ಕಣ್ಮರೆಯಾದೊಡನೆಯೇ ಕೃಷ್ಣ ಭಟ್ಟರು ಮೆಲ್ಲನೆ ಅಡಗಿದಲ್ಲಿಂದ ಹೊರಬಂದರು. ಹೊರಬಂದ ಕೃಷ್ಣ ಭಟ್ಟರು ವಾಸು ದೇವ ಭಟ್ಟರ ಕಣ್ಣಿಗೆ ಬಿದ್ದುದೇ ತಡ. ಕಟ್ಟೆ ಸಂಗ್ರಹಿಸಿಟ್ಟ ನೀರು ಕಟ್ಟೊಡೆದು ಹೋದರೆ ಹರಿದುಹೋಗುವಂತೆ ವಾಸುದೇವ ಭಟ್ಟರ ಸಹನೆ ತಪ್ಪಿಹೋಯಿತು. ಒಂದೇಸವನೆ ಕೃಷ್ಣ ಭಟ್ಟರ ಮೇಲೆ ಸಹಸ್ರನಾಮದ ಮಳೆಸುರಿದರು. "ನಾನು ಮಾಡಿದುದು ತಪ್ಪಾಯಿತು. ಹೋಗಬೇಕಿತ್ತು ನೀನು ಜೈಲಿಗೆ. ಅಲ್ಲಿಕಾಯಿಸಿಪ್ಪೆ ಜಜ್ಜಿ, ಬೀಸುವಕಲ್ಲನ್ನು ತಿರುಗಿಸಿ, ಛಡಿತಿಂದಾಗ ಬುದ್ಧಿಬರುತ್ತಿತ್ತು. ಬ್ರಾಹ್ಮಣತ್ವವನ್ನೇ ತೆಗೆದುಬಿಟ್ಟೆಯಲ್ಲ. ಶುದ್ಧ ಪಂಚಮರಂತೆ ಆ ಕೊಳಕು ಸರಾಯಿಯನ್ನೂ ಕುಡಿಯಲು ಪ್ರಾರಂಭಿಸಿದೆಯಲ್ಲಾ. ನಿನ್ನ ಮುಖನೋಡಿದರೆ ಇಡೀ ದಿವಸ ಗಂಜಿ ನೀರು ಸಹ ಸಿಗಲಿಕ್ಕಿಲ್ಲ. ಥೂ! ಥೂ!" ಎಂದು ವಾಸುದೇವ ಭಟ್ಟರು ಬೈದುಬಿಟ್ಟರು.

ಬೋನಿನಲ್ಲಿ ಬಿದ್ದ ಹುಲಿಯಂತಾಗಿತ್ತು ಕೃಷ್ಣ ಭಟ್ಟರ ಅವಸ್ಥೆ. ತುಟಿ ಎರಡುಮಾಡದೆ ಕೇಳಿದರೂ ಕೇಳದಂತೆ ನಟಿಸಿ ಮೆಲ್ಲಗಾಚೆ ಸರಿದರು.

'ಚಿಂತೆ ಮತ್ತು ಚಿತೆಗೆ ಬಿಂದುಮಾತ್ರ ವ್ಯತ್ಯಾಸ. ಚಿಂತೆಯೇ ಮು ಪ್ಪು' ಎಂದಿದೆಯಲ್ಲ. ಕೃಷ್ಣ ಭಟ್ಟರ ದುರ್ವತನೆಯಿಂದಲಾಗಿ ಅಹರ್ನಿಶಿ ಕೊರಗುತ್ತಿದ್ದುದೇ ವಾಸುದೇವ ಭಟ್ಟರಿಗೆ ಪ್ರಬಲ ಮನೋರೋಗವಾ ಯಿತು. ಈಗೀಗ ವಾಸುದೇವ ಭಟ್ಟರಲ್ಲಿ ಉತ್ಸಾಹ ಲವಲೇಶ ಇಲ್ಲ. ಯಾವ ಕೆಲಸವೂ ಮಾಡಬೇಕೆಂದವರಿಗನಿಸುವುದಿಲ್ಲ. ಕೇವಲ ಯಂತ್ರ ದಂತೆ ದಿನವಹಿಯ ಚರ್ಯೆಗಳನ್ನು ಪೂರೈಸುತ್ತಿದ್ದರು. ಅವರ ಕೈಯಲ್ಲಿ ಪಳಗಿದ ಪದ್ಮನಾಭ ಭಟ್ಟರೇ ಎಲ್ಲಾ ಕೆಲಸಗಳನ್ನೂ ನಿರ್ವಹಿಸುತ್ತಿದ್ದರು. ಅನಂತ ಭಟ್ಟ ಪದ್ಮನಾಭ ಭಟ್ಟ ಇವರಿಬ್ಬರೂ ಸುಬುದ್ಧಿಗಳಾದುದರಿಂದ

ಮಾತ್ರ ವಾಸುದೇವ ಭಟ್ಟರು ಆತ್ಮಹತ್ಯೆ ಮಾಡಿಕೊಳ್ಳಲಿಲ್ಲ. ಪದ್ಮನಾಭ ಭಟ್ಟರಿಗೆ ಒಳ್ಳೊಳ್ಳೆಯ ಬುದ್ಧಿವಾದ ಹೇಳುವುದು, ಅಣ್ಣನಂತಾಗಬೇಡ ಎನ್ನುವುದು ಅವರ ದಿನನಿತ್ಯದ ಕೆಲಸಗಳಲ್ಲೊಂದಾಯಿತು. ಗಂಗಮ್ಮ ನೊಡನೆಯೂ ಪದ್ಮನಾಭ ಭಟ್ಟರೊಡನೆಯೂ ಕೃಷ್ಣ ಭಟ್ಟರ ವಿಷಯ ನುಡಿಯುತ್ತಾ ಮರುಕಪಡುವುದು ಮತ್ತೊಂದು ಕೆಲಸವಾಯಿತು. ವಾಸುದೇವ ಭಟ್ಟರಿಗೆ ಉಂಡ ಅನ್ನ ದೇಹಕ್ಕೆ ಹಿಡಿಯದಾಯಿತು. ಕೃಷ್ಣ ಭಟ್ಟರು ಮಾತ್ರ ಮೊದಲಿನಂತೆಯೇ ಒಂದಿಷ್ಟು ಸಹ ವ್ಯತ್ಯಾಸ ವಾಗದೆ ಇದ್ದರು. ಅವರಿಗೆ ತಂದೆತಾಯಿ ಸಹೋದರರ ಅಲ್ಲದೆ ಇನ್ನುಳಿದ ಬಂಧುಬಳಗದವರ ಮರುಕವಾಗಲಿ ಮತ್ತೊಂದಾಗಲಿ ತಿಳಿಯದು. ಏನೇ ಆಗಲಿ. ತಾನೆಸಗಿದುದು ಸರಿ. ಎಂತಹ ಆಪತ್ತೇ ಬಂದರೂ ಪಾರಾಗ ಬಲ್ಲ ಅದೃಷ್ಟ ನನಗಿದೆ. ಅಂತೂ ತಾನೊಬ್ಬ ಗಣ್ಯವ್ಯಕ್ತಿ ಎಂಬ ಅಹಂಭಾವವೂ ಸ್ವೇಚ್ಛಾಪ್ರವರ್ತನೆಯೂ ದಿನೇ ದಿನೇ ಏರುತ್ತಲೇ ಇತ್ತು.

ದಿನೇದಿನೇ ಕೃಶರಾಗುತ್ತಿರುವ ವಾಸುದೇವ ಭಟ್ಟರು ಈಗೀಗ ಬಹು ಕ್ಷೀಣಹೊಂದಿದರು. ಒಂದು ಹೆಜ್ಜೆ ನಡೆದರೆ ತಲೆತಿರುಗಿದಂತಾಗಿ ಅಸಾಧ್ಯ ಆಯಾಸವವರಿಗಾಗುತ್ತಿತ್ತು. ಪಿತ್ತಪ್ರಕೋಪ ಉಷ್ಣಬಾಧೆ ಎಂದು ಗ್ರಹಿಸಿ ತಲೆಗೆ ಮುದ್ದು ಹಾಕಿ ಬಿಸಿ ನೀರು ಹೊಯಿಸಿಕೊಂಡರು. ಒಂದೆರಡು ದಿನ ಈ ರೀತಿ ಮಾಡಿದಾಗ ವಾಸುದೇವ ಭಟ್ಟರಿಗೆ ಮೈಕಾಯತೊಡಗಿತು. ಜ್ವರವೂ ಬರತೊಡಗಿತು. ರೋಗ ಬಲವಾಗಿ ಹಾಸಿಗೆ ಹಿಡಿಯಲೇ ಬೇಕಾಗಿ ಬಂತು. ಗಂಗಮ್ಮನೇ ಮೊದಲಾದವರು ಹೌಹಾರಿದರು. ಡಾಕ್ಟರರನ್ನು ಕರತಂದು ಪರೀಕ್ಷೆಮಾಡಿಸಿ ಔಷಧ ಮಾಡಬೇಕು ಆಗದೇ? ಎಂದು ವಾಸುದೇವ ಭಟ್ಟರೊಡನೆ ಒಪ್ಪಿಗೆಗಾಗಿ ಪ್ರಶ್ನಿಸಿದರು. "ನಾನು ಹುಟ್ಟಿದಾರಭ್ಯ ಡಾಕ್ಟರರ ಕುಪ್ಪಿ ಮದ್ದು ಕುಡಿದಿಲ್ಲ. ಸಾಯುವ ಕಾಲಕ್ಕೆ ಇನ್ನದು ಬೇಕೆಂದಿಲ್ಲ. ಹಳ್ಳಿಯ ವೈದ್ಯರ ಗಿಡಮೂಲಿಕೆ ಕಷಾಯವೇ ಸಾಕು." ಎಂದು ವಾಸುದೇವ ಭಟ್ಟರು ಹಟಹಿಡಿದರು. ಹಳ್ಳಿಯ ವೈದ್ಯರಾದ ಅಚ್ಚಂ ಭಟ್ಟರಿಗೆ ರೋಗವಿಂತಹುದು ಎಂದು ತಿಳಿಯದು. ಆದುದರಿಂದ ಆ ಕಷಾಯ

ಕೊಡಿರಿ. ಈ ಕಷಾಯ ಕುಡಿಸಿರಿ ಎಂದು ಒಂದಾದ ಮೇಲೆ ಮತ್ತೊಂದು ಕಷಾಯ ಮಾಡಿ ಕೊಡಲನ್ನುತ್ತಿದ್ದರು. ರೋಗವಿಳಿ ಮುಖವಾಗಲಿಲ್ಲ. ಡಾಕ್ಟರರನ್ನು ಕರತರಲು ವಾಸುದೇವ ಭಟ್ಟರು ಸರ್ವಥಾ ಸಮ್ಮತಿಸುತ್ತಿರಲಿಲ್ಲ. ಪದ್ಮನಾಭ ಭಟ್ಟರಿಗೆ ತಂದೆಯಾಣತಿ ಮೀರಿ ಡಾಕ್ಟರರನ್ನು ಕರೆತರುವ ಶಕ್ತಿ ಧೈರ್ಯಗಳಿಲ್ಲ. ಕೃಷ್ಣ ಭಟ್ಟರು ಯಾವುದಕ್ಕೂ ಕೈಗೊಡುವವರಲ್ಲ. "ನನ್ನನ್ನು ಕಂಡರೆ ಅವರಿಗಾಗದು. ಮತ್ತೆ ನಾನು ಡಾಕ್ಟರರನ್ನು ಕರತಂದೆನಾದರೆ ಔಷಧ ಕುಡಿಯುದಿದ್ದ ರೇನು ಫಲ? ಆದುದಾಗಲಿ" ಎಂದು ಕೃಷ್ಣಭಟ್ಟರನ್ನುತ್ತಿದ್ದರು. ವಾಸುದೇವ ಭಟ್ಟರಿಗೆ ಜ್ವರವೇರುತ್ತಿರುವುದನ್ನು ನೋಡಿ ಪದ್ಮನಾಭ ಭಟ್ಟರೂ ಗಂಗಮ್ಮನೂ ದಿಗಿಲುಗೊಂಡರು. "ಅನಂತನಾದರೂ ಇರುತ್ತಿದ್ದರೆ ಏನಾದರೂ ಮಾಡುತ್ತಿದ್ದನು." ಎಂದು ತಾಯಿ ಗಂಗ ಮ್ಮನುಸುರಿದಳು. ಪದ್ಮನಾಭ ಭಟ್ಟರು ಯಾರೂ ತಿಳಿಯದಂತೆ ಅಣ್ಣ ಅನಂತ ಭಟ್ಟರಿಗೆ ಟೆಲಿಗ್ರಾಮ್ ಕಳುಹಿದರು. "ತೀರ್ಥರೂಪರಿಗೆ ಕಠಿಣ ಜ್ವರ. ಕೂಡಲೇ ಹೊರಟು ಬನ್ನಿರಿ" ಎಂದು ತಿಳಿಸಿದರು. ಅನಂತ ಭಟ್ಟರು ಬಂದು ನೋಡುವಾಗ ವಾಸುದೇವ ಭಟ್ಟರ ಸ್ಥಿತಿ ಚಿಂತಾಜನಕವಾಗಿತ್ತು. ಜ್ವರ ಕೆಂಡದಂತೆ ಕಾಯುತ್ತಿತ್ತು. ಅನ್ನದ ಅಗುಳೊಂದೂ ಹೊಟ್ಟೆಗೆ ಹೋಗದೆ ದಿನಗಳು ನಾಲ್ಕೈದು ಸಂದಿದ್ದುವು. ಸ್ವಲ್ಪ ಮಟ್ಟಿಗೆ ಗಂಜಿ ನೀರೂ ಅಚ್ಚಂ ಭಟ್ಟರ ಕಷಾ ಯವೂ ಮಾತ್ರ ವಾಸುದೇವ ಭಟ್ಟರ ಹೊಟ್ಟೆಯೊಳಕ್ಕೆ ಸೇರುತ್ತಿತ್ತು. ವಾಸುದೇವ ಭಟ್ಟರು ಸೊರಗಿ ಅರ್ಧಕ್ಕರ್ಧ ಆಗಿದ್ದರು. ಅನಂತ ಭಟ್ಟರಿಗೆ ತೀರ್ಥರೂಪರಾದ ವಾಸುದೇವ ಭಟ್ಟರ ಈ ಸ್ಥಿತಿ ಕಂಡು ನೀರು ಕಣ್ಣುಗಳಲ್ಲಿ ಧಾರಾಕಾರವಾಗಿ ಇಳಿಯಿತು. "ಅಪ್ಪಾ ಅಪ್ಪಾ!" ಎಂದು ಮೆಲ್ಲಗೆ ವಾಸುದೇವ ಭಟ್ಟರನ್ನು ಕೂಗಿ ಕರೆದರು. ವಾಸು ದೇವ ಭಟ್ಟರು ಮುಚ್ಚಿದ ಕಣ್ಣುಗಳನ್ನು ಮೆಲ್ಲಗೆ ತೆರೆದು ನೋಡಿ ದರು. ಎದುರಲ್ಲಿದ್ದ ಅನಂತ ಭಟ್ಟರ ಮೊಗದಲ್ಲಿ ಕಿರುನಗೆಯ ಮಿಂಚೊಂದು ಮೂಡಿ ಮಾಯವಾಯಿತು. ಮೆಲ್ಲಗೆ ಕೈನೀಡಿ ಅನಂತ ಭಟ್ಟರ ಕೈ ಹಿಡಿದುಕೊಂಡರು. ಒಂದೇ ಸವನೆ ಕಣ್ಣೀರಿಳಿಸಿದರು.

ಮಾತು ಹೊರಡಲಿಲ್ಲ. ಅಪ್ಪಾ ಅಳಬೇಡಿ. ನಿಮಗೇನಾಯಿತು. ಜ್ವರ ಹೇಗಿದೆ. ಔಷಧ ಯಾರದು? ಎಂದು ಮೊದಲಾಗಿ ವಾಸುದೇವ ಭಟ್ಟರ ಕಣ್ಣೀರೊರಸುತ್ತಾ ಅನಂತ ಭಟ್ಟರು ಪ್ರಶ್ನಿಸಿದರು.

"ಅಳಬೇಡವೆಂದರೆ ಮನಕೇಳುತ್ತದೆಯೇ! ಅಳು ತಾನಾಗಿ ಬರುತ್ತದೆ. ಒಟ್ಟಾರೆ ನನ್ನ ತಲೆಬರಹ. ನನಗೇನೂ ಆಗುವುದಿಲ್ಲ. ಜ್ವರ ನನ್ನನ್ನೇನೂ ಮಾಡಲಾರದು. ಆದರೆ ನನಗಿರುವುದೊಂದೇ ಚಿಂತೆ. ಮುಂದೆ ನಿಮಗೇನು ಗತಿ? ಮಕ್ಕಳಿಗಾಗಿ ದುಡಿದು ಸಂಪಾದನೆ ಮಾಡಿದೆನು. ಆದರೆ ನಿನ್ನ ದೊಡ್ಡಣ್ಣ .... . .. ..... . . ...." ಎನ್ನುತ್ತಾ ಗೋಳೋ ಎಂದು ಅತ್ತರು. ಕಂಠ ಬಿಗಿಯಿತು. ಮಾತು ಹೊರಡಲಿಲ್ಲ.

"ಅಪ್ಪಾ! ನಾವು ಪ್ರಾಯ ಬಂದ ಮಕ್ಕಳು ಗರಿ ಮೂಡಿದ ಹಕ್ಕಿಗಳಂತಾದಾಗ ನಿಮಗೇಕೆ ಚಿಂತೆ? ಎಲ್ಲವೂ ನನಗೆ ಗೊತ್ತಿದೆ. ನಮ್ಮ ಅದೃಷ್ಟವೆಂದು ಸಹಿಸಿ ಸುಮ್ಮನಿರಬೇಕು. 'ಅಪ್ಪುದಪ್ಪುದು; ಬಪ್ಪುದು ತಪ್ಪದು' ಎಂದಿರುವಾಗ ಕೊರಗಿ ಫಲವೇನು? ಧೃತಿಗೆಡಬೇಡಿರಿ. ಡಾಕ್ಟರರನ್ನು ಕರತರುತ್ತೇನೆ. ಹುಶಾರಾಗುವಿರಿ. ತುಸುಸಮಾಧಾನ ಚಿತ್ತರಾಗಿರಿ." ಎಂದು ಅನಂತ ಭಟ್ಟರು ಸಾಂತ್ವನಗೊಳಿಸತೊಡಗಿದರು.

"ಈಗಲೋ ಮತ್ತೆಯೋ ಎಂದೆನ್ನುವ ಸ್ಥಿತಿ ನನ್ನದು. ಇನ್ನು ನಾನೀಕುತ್ತದಿಂದ ಪಾರಾಗಲಾರೆ. ನನಗಾಗಿ ಡಾಕ್ಟರರನ್ನು ಕರತಂದು ಹಣ ಹಾಳು ಮಾಡುವುದು ಬೇಡ. ನಿಮ್ಮ ದೊಡ್ಡಣ್ಣ ಯಾವುದೊಂದನ್ನೂ ಉಳಿಸಿಕೊಳ್ಳಲಾರ. ನೀವಿಬ್ಬರಾದರೂ ಒಳ್ಳೆಯ ನೆಲೆಯಿಂದಿರಿ. ಅಮ್ಮನನ್ನು ದುಃಖಿಸದಂತೆ ಜಾಗ್ರತೆಯಿಂದ ನೋಡಿಕೊಳ್ಳಿರಿ. ಅಣ್ಣ ಇದ್ದುದನ್ನು ಕಳೆದು ಬೀದಿಭಿಕಾರಿಯಾಗಿ ಬಂದರೆ ಒಂದಿಷ್ಟು ಅನ್ನ ಕೊಟ್ಟು ಸಲಹಿರಿ. ಇದೇ ನನ್ನ ಬಯಕೆ ಮತ್ತೆ ಹೇಳಲಿಕ್ಕೆ ಸಾಧ್ಯವಾಗದಿದ್ದರೆ ಸೋತುಹೋದೆನಲ್ಲಾ ಎಂದು ಈಗಲೇ ನಿಮ್ಮೊಡನೆ ಹೇಳಿದೆ. ಮನೆತನದ ಮರ್ಯಾದೆ ಕಾಪಾಡಿರಿ. ಇದ್ದುದನ್ನು ಭಾನಾ ಹಾನಿಯಾಗದಂತೆ ನೋಡಿಕೊಳ್ಳಿರಿ. ಉಳಿಸಿಕೊಳ್ಳಿರಿ. ಡಾಕ್ಟರರನ್ನು

ಕರೆತರುವುದು ಬೇಡವೇ ಬೇಡ." ಎಂದು ವಾಸುದೇವ ಭಟ್ಟರು ನುಡಿದರು.

"ಅಪ್ಪಾ! ನೀವಿಂತೆನಬಾರದು. ಡಾಕ್ಟರರನ್ನು ಕರೆತರಲೇ ಬೇಕು. ನೀವಂದಂತೆ ಬಾಕಿಯೆಲ್ಲದಕ್ಕೂ ಒಪ್ಪಿಕೊಳ್ಳುವೆವು. ನಿಮಗಾಗಿ ಖರ್ಚು ಮಾಡದ ಹಣ ನಮಗೇಕೆ? ನೀವೇ ದುಡಿದಿರಿಸಿದ ಹಣ ನಿಮ್ಮ ಔಷಧಕ್ಕೆ ಸಿಗಬೇಡವೇ? ಮಾನಸಿಕಯಾತನೆಯನ್ನು ಬಿಟ್ಟುಬಿಡಿರಿ. ನನಗೆ ಬಲವಾದ ಧೈರ್ಯವಿದೆ. ಯೋಗ್ಯ ಚಿಕಿತ್ಸೆ ನಡೆಯಿಸಿದರೆ ನೀವಿನ್ನೂ ಹತ್ತು ವರ್ಷ ಬದುಕುವಿರಿ. ಇನ್ನೂ ಹತ್ತಾರು ವರ್ಷ ನೀವಿರಬೇಕು. ಯೋಗ್ಯ ಬುದ್ಧಿವಾದ ಹೇಳುತ್ತಾ ಮುನ್ನಡೆಸುತ್ತಿರ ಬೇಕು. ಸುಮ್ಮನೆ ಮನಸ್ಸಿಗೇನಾದರೂ ಹಚ್ಚಿಕೊಳ್ಳದೆ ಮಲಗಿಕೊಳ್ಳಿರಿ. ಡಾಕ್ಟರರನ್ನು ಕರೆತರುವೆ"ನೆಂದು ಅನಂತ ಭಟ್ಟರು ಸಿದ್ಧರಾದರು.

"ನನಗೂ ನಿಮ್ಮೊಂದಿಗೆ ಹತ್ತಾರು ವರ್ಷ ಬದುಕಿದರಾಗಬಹು ದೆಂದು ಒಮ್ಮೊಮ್ಮೆ ತೋರುತ್ತದೆ. ಒಮ್ಮೊಮ್ಮೆ ಕೂಡಲೇ ಪ್ರಾಣ ಹೋಗಲಿ. ಅದೇ ಪರಮಸುಖ ಎಂದು ಕಾಣುತ್ತದೆ. ನಿನ್ನಿಚ್ಛೆ ಬಂದಂತೆ ಮಾಡು." ಎಂದು ವಾಸುದೇವ ಭಟ್ಟರು ಮೆಲ್ಲಗೆ ನುಡಿದರು.

ಅನಂತ ಭಟ್ಟರು ಕೂಡಲೇ ಪೇಟೆ ಕಡೆಗೆ ಸಾಗಿದರು. ಆದಷ್ಟು ಬೇಗನೆ ಡಾಕ್ಟರ್ ರಘುವೀರ ಸೆಟ್ಟಿಗಳನ್ನು ಕರೆದುಕೊಂಡು ಬಂದರು. ಡಾಕ್ಟರರು ವಾಸುದೇವ ಭಟ್ಟರನ್ನು ಪರೀಕ್ಷಿಸಿದರು. ಪರೀಕ್ಷಿಸಿ ನಿಮೋನಿಯಾ ಅಂದರು. "ಪ್ರಾಯಾಧಿಕ್ಯವಾಗಿದೆ. ರೋಗ ಮಿತಿ ಮೀರಿದೆ. ಯೌವನಸ್ಥರಾಗಿದ್ದರೆ ಎದೆ ತಟ್ಟಿ ಗುಣಪಡಿಸುವೆನೆಂದೆ ನುತಿದ್ದೆ. ಆದರೂ ಗುಣವಾಗಬಹುದೆಂಬ ಆಸೆ ತೋರುತ್ತದೆ. ಚೆನ್ನಾಗಿ ಆರೈಕೆ ಮಾಡಿ ನೋಡುವ." ಎಂಬ ಅಭಿಪ್ರಾಯವನ್ನು ಡಾಕ್ಟರ ರಿತ್ತರು. ಎರಡು ಇಂಜೆಕ್ಷನ್ ಕೊಟ್ಟರು. "ಔಷಧಿಗೆ ನನ್ನೊಡನೆ ಬನ್ನಿರಿ. ದಿನಕ್ಕೆರಡು ಇಂಜೆಕ್ಷನ್ ಕೊಡಬೇಕು. ಕಾರಿನಲ್ಲಿ ಬಂದು ಸಮಯಕ್ಕೆ ಸರಿಯಾಗಿ ಇಂಜೆಕ್ಷನ್ ಕೊಡುವೆ" ಎಂದುಸುರಿ ಹೊರಟರು. ಅನಂತ ಭಟ್ಟರು ಡಾಕ್ಟರರೊಡನೆ ಔಷಧಿಗಾಗಿ ತೆರಳಿದರು. ಬಂದ

ಡಾಕ್ಟರರು ಹೆಸರುಪಡೆದವರು. ಒಳ್ಳೆಯ ಔಷಧವವರದು. ಗುಣ ವಾಗಬಹುದು ಎಂಬ ಆಸೆ ಎಲ್ಲರಲ್ಲೂ ಮೂಡಿತು.

ಒಂದೆರಡುದಿನಗಳ ಔಷಧೋಪಚಾರ ಸಾಗಿದಾಗ ವಾಸುದೇವ ಭಟ್ಟರು ತುಸು ಗುಣಮುಖರಾದಂತೆ ಕಂಡುಬಂದರು. ಆದರೆ ಮರುದಿನ ಕಾಯಿಲೆ ಹೆಚ್ಚಾಯಿತು. ಡಾಕ್ಟರರು ಬಂದು ಇಂಜೆಕ್ಷನ್ ಕೊಟ್ಟು ಹೋದರಲ್ಲದೆ ಏನೂ ಹೇಳಲಿಲ್ಲ. ಎಲ್ಲರೂ ವಾಸುದೇವಭಟ್ಟರ ಹಾಸಿ ಗೆಯ ಬಳಿ ಕುಳಿತು ಉಪಚಾರವೆಸಗುತ್ತಿದ್ದರು, ದುಃಖಿಸುತ್ತಿದ್ದರು. ಅನಂತಭಟ್ಟರೂ ಪದ್ಮನಾಭ ಭಟ್ಟರೂ ಉಪಚರಿಸಲು ಬಂದಾಗ ವಾಸು ದೇವಭಟ್ಟರ ಮುಖದಲ್ಲಿಗೆಲವು ಬರುತ್ತಿತ್ತು. ಸ್ವಲ್ಪಸ್ವಲ್ಪ ನಿಧಾನವಾಗಿ ಮಾತನಾಡುತ್ತಿದ್ದರು. ಕೃಷ್ಣಭಟ್ಟರು ಹತ್ತಿರ ಕುಳಿತಾಗ "ಬಾಯಾರಿಕೆ ಬೇಕೇ!" ಎಂದು ಕೇಳುವಾಗ ವಾಸುದೇವಭಟ್ಟರ ಮುಖದಲ್ಲಿ ದೈನ್ಯತೆ ಮತ್ತೂ ಹೆಚ್ಚುತ್ತಿತ್ತು. ಕಳವಳ ಸ್ಪಷ್ಟವಾಗಿ ಒಡೆದು ತೋರುತಿತ್ತು. ಕಣ್ಣಲ್ಲಿ ನೀರು ಜಿನುಗಿ ಹರಿಯುತ್ತಿತ್ತು, ಕಂಠ ಬಿಗಿಯುತಿತ್ತು. ಹೀಗೆಯೇ ದಿನಗಳೆಂಟು ಸಂದರೂ ವಾಸುದೇವ ಭಟ್ಟರ ಕಾಯಿಲೆ ಇಳಿಮುಖವಾಗಲಿಲ್ಲ. ಮತ್ತಷ್ಟೂ ನಿರಾಶೆಯೇ ಕಾಣತೊಡಗಿತು. ವಾಸುದೇವ ಭಟ್ಟರು ರುಗ್ಣರಾದುದರಿಂದ ನೋಡಲಾಗಿ ಮಾತನಾಡ ಲಿಕ್ಕಾಗಿ ನೆಂಟರಿಷ್ಟರು ಬಂದರು. ಮಾವನವರಿಗೆ ಅಸೌಖ್ಯವೆಂದರಿತು ಸಾವಿತ್ರಿಯನ್ನು ಕರಕೊಂಡು ಗಜಾನನ ಭಟ್ಟರೂ ಬಂದರು. "ವಾಸು ದೇವ ಭಟ್ಟರು ಯಾವಾಗ ಹೇಗೆ ಎಂದೆನಬರುವುದಿಲ್ಲ. ಮಕ್ಕಳಾದ ನೀವು ಯಾರೂ ದೂರ ಎಲ್ಲಿಗೂ ಸರಿಯಬೇಡಿರಿ. ಪ್ರಾಣೋತ್ಕ್ರಮಣ ಸಮಯದಲ್ಲಿ ಗಂಗೋದಕ ಬಾಯಿಗೆರೆಯುವ ಭಾಗ್ಯ ತಪ್ಪಿಸಿಕೊಳ್ಳ ಬೇಡಿ." ಎಂದು ಶಂಭು ಭಟ್ಟರೆಚ್ಚರವಿತ್ತರು. ಅಳಿಯ ಕೃಷ್ಣ ಭಟ್ಟರಿಗೆ ಪ್ರತ್ಯೇಕವಾಗಿ ವಿಶೇಷ ಜಾಗ್ರತೆ ಹೇಳಿದರು. "ತಂದೆಯವರ ಬಳಿ ಯಲ್ಲೇ ಕುಳಿತಿರು. ಹಿರಿಯಮಗ ತಂದೆಯ ಸನಿಯದಲ್ಲೇ ಇರ ಬೇಕು. ಅವನಿಂದಲೇ ಎಲ್ಲಾ ಕೆಲಸಗಳೂ ಸಾಗಬೇಕು. ತಂದೆ ತಾಯಂದಿರ ಉತ್ತರಕ್ರಿಯೆಯಲ್ಲಿ ಪ್ರಧಾನಹಕ್ಕು ಅತನದು." ಎಂದು ಕೃಷ್ಣ ಭಟ್ಟರಿಗೆ ಮನದಟ್ಟಾಗುವಂತೆ ಬೋಧಿಸಿದರು.

ತಾನು ಹಿರಿಯ ಮಗ. ಇನ್ನು ಮೇಲೆ ಅಧಿಕಾರಸೂತ್ರ ಹಿಡಿಯಲಿರುವವನು; ತೀರ್ಥರೂಪ ತಂದೆಯವರಿಗೆ ಸ್ವರ್ಗದಲ್ಲಿ ಸ್ಥಳ ಮಾಡಿಸಿ ಕೊಡಲಿರುವವನು. ವಾಸುದೇವ ಭಟ್ಟರಿಗೂ ತನಗೂ ಮನ ಕೂಡಿ ಬಾರದಿದ್ದರೂ ಅಂತ್ಯಕಾಲಕ್ಕಾದರೂ ಲೋಕದ ಜನರ ಕಣ್ಣು ಕಟ್ಟಲೇ ಬೇಕಲ್ಲ. ಚೆನ್ನಾಗಿ ಸಾಯುವ ಕಾಲಕ್ಕೆ ಶುಶ್ರೂಷೆ ಮಾಡಿದ. ಒಳ್ಳೆಯ ನಡೆನುಡಿಯವನು ಎಂದೆನಿಸಕೊಳ್ಳಬೇಕಲ್ಲ. ನೆಂಟರಿಷ್ಟರ ನೆರೆಕರೆಯವರ ಕಣ್ಣಿಗೆ ಮಂಕುಬೂದಿಯೆರಚಿ ಹೇಗಾದರೂ ಅಧಿಕಾರದ ವಾಘೆಯನ್ನು ಕೈವಶಪಡಿಸಿಕೊಳ್ಳಬೇಕು ಎಂದು ಯೋಚಿಸಿ ಕೃಷ್ಣ ಭಟ್ಟರು ಬಹು ಶ್ರದ್ಧೆಯಿಂದ ರೋಗಪೀಡಿತರಾದ ವಾಸುದೇವ ಭಟ್ಟರ ಶುಶ್ರೂಷೆ ಮಾಡತೊಡಗಿದರು. "ನೀವು ಚಿಕ್ಕವರು, ಬಳಲಿ ನಾಳೆ ರೋಗಗ್ರಹಸ್ತರಾಗಬೇಡಿರಿ. ತುಸು ವಿಶ್ರಾಂತಿ ತಕ್ಕೊಳ್ಳಿರಿ." ಎಂದು ತಮ್ಮಂದಿರಿಗೆ ಯಾರಾದರೂ ಹೊರಗಿನ ಜನರಿರುವಾಗ ನುಡಿಯು ತ್ತಿದ್ದರು. "ಅಮ್ಮಾ ಅಳದಿರು. ನಾನಿರುವಾಗ ಸೊಸೆಯಿರುವಾಗ ಹೆಚ್ಚು ದಣಿಯದಿರು. ತಂದೆಯವರ ಸೇವೆಗೈಯಲು ನಾವು ಸಿದ್ಧರಾ ಗಿರುವಾಗ ನೀನಿಂತು ಬಳಲುವುದು ಸರಿಯಲ್ಲ. ಮನಕುಗ್ಗಿ ಬೆಂದು ಕರಗಿರಲು ದೇಹಕ್ಕೂ ಶ್ರಮತಂದು ಹುಚ್ಚುಹಿಡಿಸಿಕೊಳ್ಳದೆ ಇರು. ತುಸು ಸಮಾಧಾನತಕ್ಕೊಂಡು ಧೈರ್ಯತಾಳು. ಸ್ವಲ್ಪ ವಿಶ್ರಮಿಸು" ಎಂದು ಗಂಗಮ್ಮನೊಡನನ್ನುತ್ತಿದ್ದರು. "ಕೃಷ್ಣ ಭಟ್ಟರಲ್ಲಿ ಬದಲಾವಣೆ ಕಂಡುಬರುತ್ತಿದೆ. ಯೋಗ್ಯತೆಯ ನೆಲೆ ಮೂಡಿದೆ." ಎಂದು ಗಂಗಮ್ಮನೂ ಇತರರೂ ಭಾವಿಸುವಂತಾಯಿತು. ಪೆಟ್ಟಿಗೆಯ ಬೀಗದಕೈ ವಾಸು ದೇವ ಭಟ್ಟರೊಡನಿದೆ. ಉಸಿರು ಇರುವ ತನಕ ಅದನ್ನವರು ಇತರರಿಗೆ ಕೊಡಲಾರರು. ಅಧಿಕಾರಸೂತ್ರವೂ ಅವರ ವಶದಲ್ಲಿದೆ. ತಾನತ್ತಿತ್ತ ಸರಿದರೆ ಕಣ್ಮರೆಯಾದರೆ ಹೆತ್ತವರು ಬೀಗದಕೈ ತಮ್ಮಂದಿರ ವಶ ಇತ್ತರೆ ಅಧಿಕಾರವಹಿಸಿಕೊಟ್ಟರೆ ಕಾರ್ಯ ಕೆಟ್ಟುಹೋದಂತೆಯೇ ಸರಿ ಎಂದು ಕೃಷ್ಣ ಭಟ್ಟರು ಜಾಗ್ರತೆವಹಿಸತೊಡಗಿದರು.

"ನೊಂದು ಬೆಂದು ಸೀಕರಿಪೋದ ವಾಸುದೇವ ಭಟ್ಟರ ಜೀವ ಇಹಲೋಕದಲ್ಲಿರಬಯಸುವುದಿಲ್ಲ. ಡಾಕ್ಟರರಾಗಲಿ ಸಂಜೀವಿನೀ ಔಷ

ಥಿಯೇ ಆಗಲಿ ವಿಧಿಯನ್ನು ವಿಾರಿಸಿ ಜೀವವನ್ನು ಹಿಡಿದು ನಿಲ್ಲಿಸುವಂತೆ ಇಲ್ಲ." ಎಂದು ಬಂಧುಬಳಗದವರೂ ಕೈಹಿಡಿದಾಕೆಯೂ ಪುತ್ರರೂ ಮನಗಂಡರು. ಎಲ್ಲರೂ ವಾಸುದೇವ ಭಟ್ಟರ ಸುತ್ತುಮುತ್ತು ನೆರೆದರು. ನಿಡುದನಿಯಿಂದ ಗಂಗಮ್ಮನಳತೊಡಗಿದಳು. ಮಕ್ಕಳ ಕಣ್ಣಲ್ಲಿ ನೀರು ಧಾರೆಗೊಂಡಿತು. ಲಲಿತೆ ತಲೆತಗ್ಗಿಸಿ ರೋಧಿಸಿದಳು. ನೆಂಟರಿಷ್ಟರು ತಲೆಯೆತ್ತದಾದರು. ನಾರಾಯಣ ನಾರಾಯಣ ಎಂದೆಲ್ಲರೂ ಹೇಳ ತೊಡಗಿದರು. ವಾಸುದೇವ ಭಟ್ಟರು ದೀರ್ಘಶ್ವಾಸ ಬಿಡತೊಡಗಿದರು. ಗಜಾನನ ಭಟ್ಟರು ಗೀತಾಪ್ರವಚನ ಮಾಡತೊಡಗಿದರು. ಎಲ್ಲರ ಬಾಯಲ್ಲೂ ದೇವರ ನಾಮಸ್ಮರಣೆ ಮತ್ತು ಅಳುವಿನ ಧ್ವನಿ. ವಾಸು ದೇವ ಭಟ್ಟರು ಇಹಲೋಕದ ವ್ಯಾಪಾರ ಮುಗಿಸಿದರು. ಸೇರಿದ ಬಂಧುಬಳಗದವರು ಆಗ ಆಗತಕ್ಕ ಕ್ರಿಯೆಗಳನ್ನೆಲ್ಲಾ ಮಕ್ಕಳಿಂದ ಮಾಡಿಸಿದರು. ಮೃತರಿಗೆ ಮಾಡತಕ್ಕ ಕ್ರಿಯೆಗಳನ್ನು ಮಾಡುತ್ತಿರುವ ಮಧ್ಯದಲ್ಲಿ ಕೃಷ್ಣ ಭಟ್ಟರು ವಾಸುದೇವ ಭಟ್ಟರ ಸೊಂಟದಿಂದ ಬೀಗದ ಕೈಯನ್ನು ಕಿತ್ತುಕೊಂಡರು.

ವಾಸುದೇವ ಭಟ್ಟರ ಉತ್ತರಕ್ರಿಯೆಗಳೆಲ್ಲಾ ಸಾಂಗವಾಗಿ ನೆರ ವೇರಿದುವು. ಯಜಮಾನಿಕೆ ಪಡೆದ ಕೃಷ್ಣ ಭಟ್ಟರು ಬಹು ಶ್ರದ್ಧೆ ಯಿಂದ ನಾಲ್ಕು ಜನ ಸೈಗುಟ್ಟುವಂತೆ, ಹೊಗಳುವಂತೆ ಕೆಲಸಗಳನ್ನೆಲ್ಲಾ ಪೂರೈಸಿದರು. ಸಾವಿತ್ರಿ, ಗಂಗಮ್ಮ, ಅನಂತ ಭಟ್ಟ, ಪದ್ಮನಾಭ ಭಟ್ಟ ಇವರೆಲ್ಲರೂ ದುಃಖಭಾರದಿಂದ ಜರ್ಝರಿತರಾಗಿ ಮಾಡತಕ್ಕ ಕೆಲಸ ಗಳಲ್ಲಿ ತಮ್ಮ ಕರ್ತವ್ಯ ಪೂರೈಸಿದರು. ಆಪ್ತೇಷ್ಟರರಲ್ಲಿ ಪ್ರಮುಖರಾದ ಗಜಾನನ ಭಟ್ಟರೂ ಶಂಭು ಭಟ್ಟರೂ ಸಮಸ್ತಕಾರ್ಯಗಳಿಗೂ ಸಹ ಕರಿಸಿದರು.

## ಸುಳಿ ೭.

ಅನಂತ ಭಟ್ಟರಿಗೆ ಈತನ್ಮಧ್ಯೆ ಬೇಗನೇ ಬರಬೇಕೆಂದು ಪ್ರಾಲಕರ ಪತ್ರ ಬಂತು. ತಂದೆಯಿಲ್ಲದ ಮನೆ ಈಗವರಿಗೆ ಶೂನ್ಯವಾಗಿ ಕಾಣು ತ್ತಿದೆ. ಅಣ್ಣ ಕೃಷ್ಣ ಭಟ್ಟರ ನಡತೆ ಮೊದಲಿನಿಂದಲೇ ಅವರಿಗರಿದಿತ್ತು.

ವಾಸುದೇವ ಭಟ್ಟರಿರುವಾಗ ಮನೆಯ ಚಿಂತೆ ಇರಲಿಲ್ಲ." ಈಗ ತಾಯಿ ಗಂಗಮ್ಮ ತಮ್ಮ ಪದ್ಮನಾಭ ಭಟ್ಟ ಇವರು ಅವರ ಬೆನ್ನು ಹಿಡಿದಿರುವರು. "ನೀನೇ ಗತಿ ನಮ್ಮನ್ನು ಈ ಕಿರುಕುಳದಲ್ಲಿ ತಳ್ಳಿಹೋಗದಿರು" ಎಂದ ವರನ್ನುವಾಗ "ಏನೆಸಗಲಿ" ಎಂದು ಹೃದಯ ತಳಮಳಗೊಳ್ಳುತ್ತಿತ್ತು. ಮರಣೋನ್ಮುಖರಾದ ಪಿತೃವರ್ಯರು ತಮಗಂದ ನುಡಿಗಳು ಈಗಲೂ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದ್ದುವು. "ಪಿತ್ರಾರ್ಜಿತ ಸೊತ್ತು. ಹಾಳಾಗ ದಂತೆಚ್ಚರಿಕೆವಹಿಸಬೇಕು. ತಾಯಮ್ಮನನ್ನೂ ತಮ್ಮನನ್ನೂ ಮರೆಯ ದಿರು. ಅಣ್ಣನನ್ನು ನಂಬಬೇಡ." ಎಂದ ನುಡಿಗಳು ಹೃದಯದಲ್ಲಿ ಶಿಲಾಲಿಪಿಯಂತಾಗಿದ್ದುವು. ಅನಂತ ಭಟ್ಟರ ಹೃದಯ ಸರಳ. ಅಣ್ಣ ನಲ್ಲೂ ಮಮತೆ ಇದೆ. ಆದರೆ ಸರಿಹೋಗದುದು ಅವರ ವರ್ತನೆ ಮಾತ್ರ. ಅಣ್ಣ ಸರಿದಾರಿಗೆ ಬರಲಾರರೇ? ತಲೆಯಲ್ಲಿ ಹೊರೆ ಬಿದ್ದಾಗ ತನ್ನಷ್ಟಕ್ಕೇ ಸರಿಯಾದಾರು. ತಾಯಿ ತಮ್ಮ ಇಬ್ಬರೂ ಮನೆಯಲ್ಲಿದ್ದರೆ ಅಣ್ಣನ ಸ್ವೇಚ್ಛಾವರ್ತನೆ ಕಡಿಮೆಯಾಗದಿರದು. ತನ್ನೊಂದಿಗೆ ಬರುವೆ ನೆನ್ನುವ ತಮ್ಮನನ್ನು ಕರೆದುಕೊಂಡು ಹೋದರೆ ಇಲ್ಲಿ ತಾಯಿ ಮಾತ್ರ ಆಗುವಳು. ಅವಳಿಗೆ ದುಃಖಭಾರ ಹೆಚ್ಚುವುದು. ತಮ್ಮನಿರದಿದ್ದರೆ ಅಣ್ಣ ನಿರಂಕುಶನಾಗುವನು. ಸದ್ಯ ಹೇಗಾಗುವುದೋ ನೋಡುವ. ತಂದೆ ತೀರಿದ ಮರುಘಳಿಗೆಯಲ್ಲೇ ಬೇರೆ ಬೇರೆ ಆದರು ಎಂಬಪವಾದ ಬರಬಾರದು. ತಾಯಿ ತಮ್ಮ ಇವರಿಬ್ಬರೂ ಮನೆಯಲ್ಲಿರಲಿ. ಅಣ್ಣನಿಗೆ ಯೋಗ್ಯ ಬುದ್ಧಿವಾದ ಭಾವ ಗಜಾನನ ಭಟ್ಟರಿಂದ ಹೇಳಿಸುವೆ. ಇದುವೇ ಒಳ್ಳಿತು ಎಂದು ಅನಂತ ಭಟ್ಟರು ಮನದಲ್ಲಿ ನಿಶ್ಚಯಿಸಿ ಗಜಾನನ ಭಟ್ಟರೊಡನೆ ಅಣ್ಣನಿಗೆರಡು ಮಾತು ಹೇಳಲು ಹೇಳಿದರು.

ಗಜಾನನ ಭಟ್ಟರು ಶಂಭು ಭಟ್ಟರಿರುವಾಗಲೇ ಕೃಷ್ಣ ಭಟ್ಟರ ಸನಿಯಕ್ಕೆ ಸರಿದರು. "ಭಾವಾ! ನೀನು ಕಲಿತವ. ನಿನಗೆ ನಾನನ್ನ ತಕ್ಕುದಿಲ್ಲವಾದರೂ ಬಂಧುಪ್ರೇಮದಿಂದಲೂ ಸಲುಗೆಯಿಂದಲೂ ಎರಡು ಮಾತು ಹೇಳಬೇಕಾಗಿದೆ. ಮಾವ ವಾಸುದೇವ ಭಟ್ಟರು ಊರಲ್ಲಿ ಪ್ರತಿಷ್ಠಿತರೆನಿಸಿ ಬಾಳಿ ಹೆಸರಾಂತು ಕೈಲಾಸವನ್ನೇರಿದರು. ನಿಮಗಾಗಿ ಬೇಕಾದಷ್ಟು ಆಸ್ತಿ ಹಣ ಮೊದಲಾದುವನ್ನು ಬಿಟ್ಟುಹೋದರು. ಇನ್ನು

ಮೇಲೆ ಮಾವನ ಸ್ಥಾನ ದೊಡ್ಡ ಭಾವನಿಗೆ. ಮಾವನಿಗಿಂತ ನಾಲ್ಕು ಪಾಲು ಮಿಗಿಲೆನಿಸಿ ನಾಲ್ಕು ಜನರಿಗೆ ಹೊಂದಿ ನಡೆದು ನಮ್ಮಂತಹ ಬಂಧುಗಳ ಕಣ್ಮಣಿಯಾಗಬೇಕು. ತಾಯಿಯಲ್ಲಿ ಸಲಹೆ ಕೇಳಿ ತಮ್ಮ ನಿಂದ ನೆರವು ಪಡೆದು ಅವರ ಮನನೋಯಿಸದೆ ಸಾಕಿ ಸಲಹಬೇಕು. ಯೋಗ್ಯ ಮನೆತನ ಎಂದು ಊರವರನ್ನುವಂತೆಸಗಿದರೆ ನೀವೆಲ್ಲರೂ ಒಳ್ಳೆಯದಾಗಿದ್ದರೆ ಅದೇ ನಮಗೊಂದು ಸಂತೋಷ. ನೀವೆಲ್ಲರೂ ಒಳ್ಳೆಯದಾಗಿ ಐಕಮತ್ಯದಲ್ಲಿದ್ದರೆ ನಮ್ಮಂತಹ ಬಂಧುಗಳಿಗೆ ಒಂದು ಹೊತ್ತು ಬಂದು ಇದ್ದು ಉಂಡುಹೋಗಲು ಮನಬರುವುದು" ಎಂದು ಗಜಾನನ ಭಟ್ಟರು ನಗುನಗುತ್ತಾ ಕೃಷ್ಣ ಭಟ್ಟರೊಡನಂದರು.

"ಭಾವಾ! ನೀವಂದ ಮಾತು ಸತ್ಯ. ನೀವನ್ನುವ ಮೊದಲೇ ಅರಿತ ವಿಷಯ ಅದು. ಹಾಗೆಯೇ ಆಗಬೇಕೆಂದು ನನ್ನಿಚ್ಛೆ. ಆದರೆ ಒಂದು ಮಾತು. ಜನಕರಾದ ವಾಸುದೇವ ಭಟ್ಟರು ಹಳೆ ಮರ್ಜಿಯವರಾಗಿದ್ದರು. ನನ್ನದು ಹೊಸ ಮರ್ಜಿ. ಹಾಗಾಗಿ ಹಳತು ಹೊಸತುಗಳ ಘರ್ಷಣೆಯಿಂದಾಗಿ ನಮಗೆ ಸರಿಬೀಳದಿದ್ದರೂ ನನಗೆ ತಂದೆಯವರಲ್ಲಿ ಪೂಜ್ಯ ಭಾವನೆ ಇದೆ. ತಾಯಿಯೂ ತಮ್ಮನೂ ತಂದೆಯವರ ಹಳೆಯ ಸಂಪ್ರದಾಯದಲ್ಲೇ ನುರಿತವರಾದುದರಿಂದ ನನ್ನ ಹೊಸ ವಿಧಾನಗಳಿಗೆ ಅಡ್ಡಿ ಬಂದರೆ ಸರಿಯಾಗಲಾರದು. ಅವರೂ ಕಾಲಕ್ಕೆ ತಕ್ಕಂತೆ ಹೊಸ ವೇಷ ಕಟ್ಟಬೇಕು. ಅಂದವಾಗಿ ಕೂಡಿ ಬಾಳಲು ಅವರೂ ಸಹಕರಿಸಬೇಕು. ನನಗವರಲ್ಲಿ ಪ್ರೀತಿಯಿದೆ. ನಿಮ್ಮೆಲ್ಲಾ ಬಂಧುಗಳ ಇಚ್ಛೆ ನಿರೀಕ್ಷಿಸಿದುದಕ್ಕಿಂತ ಎಷ್ಟೋ ಮಿಗಿಲಾಗಿ ಆಗದಿದ್ದರೆ ಈ ಭಾವ ಕೃಷ್ಣ ಭಟ್ಟನೇ ಅಲ್ಲವೆಂದರಿತುಕೊಳ್ಳಿರಿ" ಎಂದು ಕೃಷ್ಣ ಭಟ್ಟರು ಜಂಭಕೊಚ್ಚಿದರು. ಗಜಾನನ ಭಟ್ಟರೂ ಶಂಭು ಭಟ್ಟರೂ ತಲೆಯಲ್ಲಾಡಿಸಿದರು. ಅನಂತ ಭಟ್ಟರಿಗೆ ಒಳಗೊಳಗೆ ನಗು ಬಂತು. ಬಂಧುಗಳೆಲ್ಲಾ ತಂತಮ್ಮ ಮನೆಗಳಿಗೆ ಹಿಂತೆರಳಿದರು. ಅನಂತ ಭಟ್ಟರು ಎಲ್ಲರನ್ನೂ ಸಮಾಧಾನಪಡಿಸಿ ತಮ್ಮ ಉದ್ಯೋಗ ನೋಡಲು ತೆರಳಿದರು.

ಕೃಷ್ಣ ಭಟ್ಟರಿಗೀಗ ಸರ್ವಾಧಿಕಾರ ಬಂದಿದೆ. ವಾಸುದೇವ ಭಟ್ಟರು ಸಂಪಾದಿಸಿದ ಜಮೀನಿನ ಮತ್ತು ಹಣದ ಆಢಳಿತೆ ಅವರ

ದಾಗಿದೆ. ಈಗವರ ಉತ್ಸಾಹ ಅದಮ್ಯವಾಗಿದೆ. ಅವರು ಗಾಳಿಯಲ್ಲಿ ವಿಹರಿಸುತ್ತಿದ್ದರು. ದೇವಲೋಕದ ಇಂದ್ರಪದವಿ ಸಿಕ್ಕಿದಂತಾಗಿದೆ. ತಾನು ಸರ್ವಶ್ರೇಷ್ಠ ಎಲ್ಲವನ್ನೂ ಮಾಡಬಲ್ಲವನೆಂಬ ಹೆಮ್ಮೆ ಬಂದಿದೆ. "ಗದ್ದೆ ತೋಟಗಳ ಆರೈಕೆ ಮೊದಲಿನವರು ಮಾಡಿದುದು ಸರಿಯಲ್ಲ. ತಾನು ಹೊಸ ಮಾದರಿಯಲ್ಲೆಸಗುವೆ" ಎಂದು ಜಂಭಕೊಚ್ಚುತ್ತಿದ್ದರು. ಅನವರತ ದುಡಿದು ವೃಥಾ ಕಾಲಹರಣ ಮಾಡಿ ಗದ್ದೆ ಮತ್ತು ತೋಟಗಳಲ್ಲಿ ಪಡೆವ ಉತ್ಪತ್ತಿ ಲೆಕ್ಕಹಾಕಿ ನೋಡಿದರೆ ದುಡಿದುದಕ್ಕೆ ಸಾಲದು. ಆದ್ದರಿಂದ ಹೆಚ್ಚು ಕೆಲಸ ಮಾಡದೆ ಅಷ್ಟಕ್ಕಷ್ಟೆ ಮಾಡಿದರೆ ಸಾಕು. ದುಡ್ಡನ್ನೂ ಸಮಯವನ್ನೂ ಬೇರೆ ಕೆಲಸಗಳಿಗುಪಯೋಗಿಸಿ ಹಲವಾರು ಬಗೆಯಿಂದ ಲಾಭಪಡೆಯಬೇಕು." ಎಂದು ಕೃಷ್ಣ ಭಟ್ಟರ ತರ್ಕ. ಗದ್ದೆ ಮತ್ತು ತೋಟಗಳ ಕೆಲಸಗಳಿಗೆ ಇಷ್ಟು ಮಾಡಿದರೆ ಸಾಕು ಎಂದು ಮಿತಿಹಾಕಿದರು. ತಮ್ಮ ಪದ್ಮನಾಭ ಭಟ್ಟರು "ಅಣ್ಣಾ ತಂದೆ ಯವರಿರುವಾಗ ಹೀಗಲ್ಲ. ಇದಕ್ಕಿಂತ ಹೆಚ್ಚು ಈ ರೀತಿ ಹೀಗೆ ಕೆಲಸ ಮಾಡುತ್ತಿದ್ದರು. ಎಂದು ಕೆಲಸಗಳ ವಿಧಾನಗಳನ್ನುಸುರಿ— "ಆ ರೀತಿ ಮಾಡಿದರೇನೇ ನಮಗೆ ಶ್ರೇಯಸ್ಸು" ಎಂದು ಹೇಳಿದರೆ ಕೃಷ್ಣ ಭಟ್ಟರಿಗೆ ಸಿಟ್ಟೇರುತ್ತಿತ್ತು. "ನೀನೊಬ್ಬ ಪೆದ್ದ ನಿನಗೇನೂ ತಿಳಿಯದು. ನನಗುಪದೇಶಿಸಲು ನೀನು ಸಾಲದು. ನಾನು ಕಲಿತವ, ಹಿರಿಯವ, ತಿಳಿದವ, ನಿಮಗೆಲ್ಲಾ ಹುಚ್ಚು. ಮಣ್ಣಿನಲ್ಲಿ ಬೆಳೆದುದನ್ನೆಲ್ಲಾ ಮಣ್ಣಿಗೇ ಸುರಿದುಬಿಡಬೇಕೆಂದು ನಿಮ್ಮಿಚ್ಛೆ. ಮಣ್ಣಿನಲ್ಲೇ ಬೆಳೆದು ಮಣ್ಣೇ ದೇವರೆನ್ನುವ ಹುಳುಗಳು ನೀವು ಸ್ವಲ್ಪ ಬುದ್ಧಿ ಖರ್ಚು ಮಾಡಿ ವಿಚಾರಿಸಿ ನೋಡಬೇಕು" ಎಂದು ತಮ್ಮನನ್ನು ಕೃಷ್ಣ ಭಟ್ಟರು ಜರೆಯುತ್ತಿದ್ದರು.

ಅಣ್ಣ ಕೃಷ್ಣ ಭಟ್ಟರ ಸ್ವಭಾವ ಪರಿಚಯ ಪದ್ಮನಾಭ ಭಟ್ಟರಿಗೆ ಚೆನ್ನಾಗಿತ್ತು. "ಕೋಳಿಗೆ ಮೂರು ಕಾಲೆಂದರೂ ಒಪ್ಪಲೇ ಬೇಕು. ತಲೆಯಲ್ಲಾಡಿಸಬೇಕು. ಇಲ್ಲವಾದರೆ ಸಿಟ್ಟುಬಂದು ಸಿಕ್ಕಾಬಟ್ಟೆಯಾಗುವುದು. 'ಮೌನಂ ಸರ್ವಾರ್ಥ ಸಾಧನಂ' ಎಂದಿದೆಯಲ್ಲ. ಸುಮ್ಮಗಿದ್ದುಬಿಡುವೆ" ಎಂದು ಸುಮ್ಮಗಾಗುತ್ತಿದ್ದರು. ಆದರೂ ಭವಿಷ್ಯದ

ವಿಚಾರ ಬಂದಾಗ ತಲೆಕರಡಾಗುತ್ತಿತ್ತು. ಏನೂ ಆಗಲಿ ನನ್ನ ಕರ್ತವ್ಯ ಪೂರೈಸುವೆ. ನಾನಾಗಿ ಕಾಲುಕೆರೆಯಲಾರೆ. ಆದಷ್ಟು ಸಹಕರಿಸುವೆ ಎಂದು ಮನದಲ್ಲೆಂದುಕೊಳ್ಳುತ್ತಿದ್ದರು.

ವಾಸುದೇವ ಭಟ್ಟರಿರುವಾಗ ಗಂಗಮ್ಮ ಮನೆಯೊಡತಿಯಾಗಿದ್ದಳು. ಈಗಲೂ ಹಿರಿಯವಳಾದುದರಿಂದ ಅದೇ ರೀತಿ ವರ್ತಿಸಬೇಕು. ಕ್ರಮಪ್ರಕಾರದಂತಾದರೆ ಮಕ್ಕಳೂ ಸೊಸೆಯೂ ಗಂಗಮ್ಮನ ಸಲಹೆಕೇಳಿ ತದನುಸಾರ ನಡೆಯಲೇಬೇಕು. ಆದರೆ ಪರಿಸ್ಥಿತಿ ವಿಪರೀತವಾಗಿತ್ತು. ಕೃಷ್ಣ ಭಟ್ಟರು ಮನೆಯೊಡೆಯರಾಗಿರುವಾಗ ಅವರರ್ಧಾಂಗಿಯಾದ ತಾನೇ ಮನೆಯೊಡತಿ. ಗಂಗಮ್ಮ ನಿವೃತ್ತಪಡೆದವರ ಸ್ಥಾನದಲ್ಲಿರಬೇಕು. ಯಾವುದೊಂದು ಗೃಹಭಾರದ ಆಢಳಿತದಲ್ಲೂ ಕೈಹಾಕಬಾರದು. ಸಾಧ್ಯವಿದ್ದಷ್ಟು ದುಡಿದು ದೇವರ ನಾಮಸ್ಮರಣೆಯಲ್ಲಿ ದಿನಗಳೆಯಬೇಕು ಎಂದು ಲಲಿತೆಯ ಮನೋಭಿಪ್ರಾಯವಾಗಿತ್ತು. ಮನದಲ್ಲಿ ಕಟ್ಟಿಟ್ಟುದು ಅಲ್ಲೇ ನಿಲಲಾರದು. ಹೃದಯದಲ್ಲಿ ಕುದಿದಾಗ ಜ್ವಾಲಾಮುಖಿಯಂತೆ ಹೊರಬಾರದಿರದು. ಲಲಿತೆ ಅತ್ತೆ ಗಂಗಮ್ಮನ ಮೇಲೆ ವಿಷಕಾರತೊಡಗಿದಳು. ಮುದುಕಿ ಗಂಗಮ್ಮ ಮೊದಲುಮೊದಲು ಲಕ್ಷ್ಯಕ್ಕೆ ತಾರದಿದ್ದರೂ ಲಲಿತೆ ಬಲಾತ್ಕಾರಪೂರ್ವಕ ತನ್ನ ಅಧಿಕಾರವನ್ನಾಕೆಯ ಮೇಲೆ ಹೇರತೊಡಗಿದಳು. ತನ್ನಿಂದ ಮುದುಕಿ ಗಂಗಮ್ಮನನ್ನು ಬಗ್ಗಿಸಲಸದಳವೆಂದು ಕಂಡುಬಂದಾಗ ಪತಿಯಾದ ಕೃಷ್ಣ ಭಟ್ಟರನ್ನು ತಾಯಿಯ ಮೇಲೆ ಕೆರಳಿಸಿದಳು. ಗಂಗಮ್ಮ ನಿಟ್ಟುಸಿರಿಟ್ಟು ಮೂಲೆಸರಿಯಬೇಕಾಗಿ ಬಂತು. ಮನೆಯೊಡತಿಯಾದವಳು ಆಜ್ಞಾಧಾರಕಳಾಗಬೇಕಾದ ಪ್ರಸಂಗ ಬಂದೊದಗಿತು. ಮನೆಯೊಳಗೆ ಪಕ್ಷವೆರಡಾಯಿತು. ಒಂದು ಗಂಗಮ್ಮ ಪದ್ಮನಾಭ ಭಟ್ಟರ ಪಕ್ಷ. ಇನ್ನೊಂದು ಅಧಿಕಾರಾರೂಢರಾದ ಲಲಿತೆ ಕೃಷ್ಣ ಭಟ್ಟರ ಪಕ್ಷ. ಪಕ್ಷವೆರಡಾದರೂ ಗಂಗಮ್ಮನೂ ಪದ್ಮನಾಭ ಭಟ್ಟರೂ ಸಹನಾಶೀಲರೂ ಅನುಭವಿಗಳೂ ಆದುದರಿಂದ ಮನೆಯ ಹೊಲಸು ಬೀದಿಗೆ ಬರಲಿಲ್ಲ.

ಅತ್ತ ಸಾವಿತ್ರಿ ತುಂಬಿದ ಗರ್ಭಿಣಿಯಾಗಿದ್ದಳು. ಅವಳತ್ತೆ ತೀರಿ ವರ್ಷಗಳೆರಡು ಸಂದಿದ್ದುವು. ಮನೆಯಲ್ಲಿ ಬೇರೆ ಜನರಿಲ್ಲ. "ತಾಯಿ

ಗಂಗಮ್ಮ ಕೆಲಸಮುಯುದ ವರೆಗೆ ಬಳಿಯಲ್ಲಿದ್ದರೆ ಚೆನ್ನಾಗಿತ್ತು. ಅಲ್ಲಿ ತವರೂರಲ್ಲಿ ತಂದೆ ತೀರಿದ ಚಿಂತೆಯಿಂದಲೂ ಅಣ್ಣದೇವರ ಕಾರ್ಯ ಭಾರದಿಂದಲೂ ತಾಯಿ ಬಳಲಿರಬಹುದು. ನಾಲ್ಕು ದಿನ ಇಲ್ಲಿ ಬಂದು ಇದ್ದರೆ ಆಕೆಯ ಚಿಂತೆ ತುಸು ಮಟ್ಟಿಗಾದರೂ ಕಡಿಮೆಯಾಗಬಹುದು. ನನಗೂ ಸಹಾಯವಾಗುವುದು. ಸಾಧ್ಯವಾದರೆ ಹೇಳಿ ತಿಳಿಸಿ ಕರೆದು ಕೊಂಡು ಬಂದರಾಗುತ್ತಿತ್ತು" ಎಂದು ಸಾವಿತ್ರಿ ಗಜಾನನ ಭಟ್ಟರೊಡ ನಂದಳು. ಗಜಾನನ ಭಟ್ಟರಿಗೂ "ಆಗದೆ ಇಲ್ಲ" ಎಂದು ತೋರಿತು. ಮರುದಿನವೇ ಹಲಸಿನಡ್ಕಕ್ಕೆ ಬಂದರು. ಹಲಸಿನಡ್ಕದ ಬದಲಿದ ಸ್ಥಿತಿ ನೋಡಿ ಗಜಾನನ ಭಟ್ಟರಿಗೆ ತಲೆ ತಿರುಗಿದಂತಾಯಿತು. ಕೃಷ್ಣ ಭಟ್ಟರೆಲ್ಲೋ ಹೊರಗೆ ಹೋಗಿದ್ದರು. ಗಂಗಮ್ಮ, ಪದ್ಮನಾಭ ಭಟ್ಟರ ಸಂಕಷ್ಟ ಕೃಷ್ಣ ಭಟ್ಟರ ತುದಿ ಮೊದಲಿಲ್ಲದ ಕಾರ್ಯಭಾರ ಇವುಗಳನ್ನು ನೋಡಿ "ಬಂಧುಗಳಿಗೆ ಕೆಡುಗಾಲ ಬಂತಲ್ಲ" ಎಂದು ಮರುಗಿದರು. ಕೃಷ್ಣ ಭಟ್ಟರು ಬಂದೊಡನೆ ಬಂದ ಉದ್ದೇಶವನ್ನು ಎಲ್ಲರೆದುರಿನಲ್ಲೂ ಸ್ಪಷ್ಟ ತಿಳಿಸಿದರು.

ಗಜಾನನ ಭಟ್ಟರು ಗಂಗಮ್ಮನನ್ನು ಕರೆದೊಯ್ಯಲು ಬಂದಿರುವ ರೆಂದರಿತಾಗ ಲಲಿತೆಗೆ ಬಲು ಸಂತೋಷವಾಯಿತು. "ಹಾಳು ಮುದುಕಿ ದಿನನಿತ್ಯ ಅವಳ ಕಿರಿಕಿರಿ ತಪ್ಪಿದ್ದಲ್ಲ. ಕಳಿಸಿ ಬಿಡಿ." ಎಂದು ಏಕಾಂತ ದಲ್ಲಿ ಪತಿಯೊಡನೆ ಮೊತ್ತಮೊದಲಾಗಿ ತಿಳಿಸಿದಳು. ಕೃಷ್ಣ ಭಟ್ಟರು ತಾಯಿ ಗಂಗಮ್ಮನು ತಂಗಿಯಲ್ಲಿಗೆ ಕಳುಹಲೊಪ್ಪಿಗೆಯಿತ್ತರು. ಗಂಗ ಮ್ಮನೂ ಮಗಳನ್ನೊಮ್ಮೆ ನೋಡಿ ಬರುವೆನೆಂಬಾಸೆಯಿಂದ ಸಮ್ಮತಿಸಿದಳು. "ತಾಯಿ ಬೇರೆಡೆ ಹೋದರೆ ಈ ನರಕ ಕುಂಡದಲ್ಲಿ ದಿನಗಳೆವುದೆಂತೆ"ಂದು ಪದ್ಮನಾಭ ಭಟ್ಟರ ಮನಮಿಡುಕಿತು. ಆದರೂ ಏನೂ ಹೇಳಲಿಲ್ಲ. ಗಂಗಮ್ಮ ಮಗಳ ಮನೆಗೆ ತೆರಳುವ ಮೊದಲು ಗಜಾನನ ಭಟ್ಟರೊಂದಿಗೆ ಪದ್ಮನಾಭ ಭಟ್ಟರನ್ನು ಗುಟ್ಟಿನಲ್ಲಿ ಸಂಧಿಸಿದಳು. "ನಾನಿಲ್ಲವೆಂದು ಶೋಕಿಸಬೇಡ. ಸಹನೆ ತೆಗೆದುಕೋ! ಅವರೇನೆಂದರೂ ಉಸುರಿತ್ತದಿರು. ದುಡುಕಬೇಡ. ಪರಿಸ್ಥಿತಿ ವಿಷಮವಾದರೆ ನನಗರಿಯದೆ ಏನೂ ಮಾಡದಿರು. ದೇವರು ಕೈಬಿಡಲಾರ". ಎಂದು ಪ್ರೇಮದಿಂದ ಪದ್ಮನಾಭ ಭಟ್ಟರನ್ನು ಸಂತವಿಸಿದಳು. ಮಗಳಲ್ಲಿಗೆ ತೆರಳಿದಳು.

"ಮುದುಕಿ ಗಂಗಮ್ಮ ದೂರಸಾಗಿದ್ದಾಳೆ. ಅನಂತರ ಭಟ್ಟರು ಪರವೂರಲ್ಲಿದ್ದಾರೆ. ಇವನೊಬ್ಬ ಮಾತ್ರ ದಾರಿಗಡ್ಡವಾಗಿ ಬಂಡೆಕಲ್ಲಿನಂತಿದ್ದಾನೆ. ಇವನಲಕ್ಷ್ಯ ನಮಗೇಕೆ?" ಎಂದು ಲಲಿತೆಯೂ ಕೃಷ್ಣ ಭಟ್ಟರೂ ನಿರಂಕುಶ ವೃತ್ತಿಗಳಾದರು. ಪದ್ಮನಾಭ ಭಟ್ಟರು ಮನೆಯಲ್ಲಿದ್ದರೂ ಇಲ್ಲದಂತಾದರವರ ಪಾಲಿಗೆ. ಪದ್ಮನಾಭ ಭಟ್ಟರ ಊಟೋಪಚಾರಗಳ ಕುರಿತು ಗಂಗಮ್ಮ ತಾನಿರುವಾಗ ಎಚ್ಚರಿಕೆ ತಕ್ಕೊಳ್ಳುತ್ತಿದ್ದಳು. ಈಗ ಬದುಕಬೇಕಾದರೆ ತನ್ನ ವಿಚಾರವೇನಿದ್ದರೂ ತಾನೇನೋಡಿಕೊಳ್ಳಬೇಕೆಂದಾಯಿತು ಪದ್ಮನಾಭ ಭಟ್ಟರಿಗೆ.

ಕೃಷ್ಣ ಭಟ್ಟರು ಜಂಭದ ಕೋಳಿ. ಅವರಂದುದು ಸರಿ. ಅವರು ಮಾಡಿದುದು ನ್ಯಾಯ. ಅವರಷ್ಟು ಬುದ್ಧಿಶಾಲಿಗಳು ಇನ್ನೊಬ್ಬರಿಲ್ಲ. ಎಂದು ಹೊಗಳಿಕೆಯ ನಾಲ್ಕು ಮಾತು ಹೇಳಿದರೆ ಸಾಕು. ಅವರುಬ್ಬುವರು. ಎಂತಹ ಕಾರ್ಯಬೇಕಾದರೂ ಅವರಿಂದ ಸಾಧಿಸಿಕೊಳ್ಳಬಹುದು ಎಂದು ಎಲ್ಲರೂ ತಿಳಿದಿದ್ದರು. ಮೊದಲಿನ ಗೆಳೆಯರಾದ ಬಟ್ಯಪ್ಪ, ತ್ಯಾಂಪು, ಐತಪ್ಪ ಮೊದಲಾದ ಉಂಡಾಡಿ ಹೊಗಳುಭಟರ ನೆರವಿ ಕೃಷ್ಣ ಭಟ್ಟರನ್ನೋಲೈಸತೊಡಗಿತು. ಕೃಷ್ಣಭಟ್ಟರೆಲ್ಲಿ ಹೋಗುವುದಿದ್ದರೂ ಹಿಂದೆ ಓಲೈಸಲು ಈ ಜನರ ಸಂದಣಿ. ಇವರ ಹೊಗಳು ನುಡಿಗಳಿಗೆ ಕಿವಿನಿಮಿರಿದ ಕೃಷ್ಣ ಭಟ್ಟರು ಸಂಪೂರ್ಣ ಅವರ ಬಲೆಯಲ್ಲಿ ಬಿದ್ದರು. ಬೆಲ್ಲಕ್ಕೆ ಇರುವೆ ಮುತ್ತುವಂತೆ ಇವರು ಕೃಷ್ಣ ಭಟ್ಟರನ್ನು ಮುತ್ತಿ ತಮ್ಮ ತಮ್ಮ ಕಾರ್ಯ ಸಾಧಿಸಿಕೊಳ್ಳುತ್ತಿದ್ದರು. ಈ ಪೋಕರಿಗಳ ತಂಡದೊಂದಿಗೆ ಅಲೆದಾಡುವುದು, ದೊಡ್ಡಸ್ತಿಕೆ ಮೆರೆಸುವುದು, ವಿನೋದವಿಹಾರಗಳನ್ನೆಸಗುವುದು, ಅನಾವಶ್ಯವಾದೆಡೆ ಹಣ ಸುರಿಸುವುದು ಕೃಷ್ಣ ಭಟ್ಟರ ಪ್ರಥಮ ಉದ್ಯೋಗವಾಯಿತು. ಜಮೀನಿನ ಕಡೆ ಲಕ್ಷ್ಯಹರಿಯದಾಯಿತು. ಆಸ್ತಿಪಾಸ್ತಿಯು ದೀಪಾವಳಿ (ಆರೈಕೆ) ನಡೆಯದಿರುವುದನ್ನು ಕಂಡು ಪದ್ಮನಾಭ ಭಟ್ಟರಿಗೆ ಬಲು ದುಗುಡವಾಯಿತು. "ಯಾರೂ ಜಮೀನಿನ ಕಡೆ ಲಕ್ಷ್ಯವೀಯದಿದ್ದರೆ ನಾಳೆ ಗತಿ ಏನು?" ಎಂದು ಪದ್ಮನಾಭ ಭಟ್ಟರು ಶಕ್ತಿಮೀರಿ ದುಡಿಯುತ್ತಿದ್ದರು. ವಿಶ್ವಾಸದ ಕೂಲಿಯವರಾದ ಅಂತೋಣಿ, ಅಂಗರ, ಮಾಲಿಂಗ

ನಾಯಕರೊಂದಿಗೆ ಸರಿಯಾಗಿ ಜಮೀನಿನ ಕೆಲಸಾವಳಿ ಮಾಡು ತ್ತಿದ್ದರು.

ವೃಥಾ ವೆಚ್ಚಮಾಡಲು ಕೃಷ್ಣ ಭಟ್ಟರಿಗೆ ಹಣ ಧಾರಾಳವಿತ್ತು. ವಿಶ್ವಾಸಿಗಳಾಗಿ ದುಡಿಯುವವರಿಗೆ ಕೂಲಿ ಕೊಡಲು ಕೃಷ್ಣ ಭಟ್ಟರಲ್ಲಿ ಹಣವಿಲ್ಲದಾಗುತ್ತಿತ್ತು. ಅಂತೋಣಿ, ಅಂಗಾರ, ಮಾಲಿಂಗ ನಾಯಕರು ಕೂಲಿ ಕೇಳುವಾಗ ಕೃಷ್ಣ ಭಟ್ಟರಿಗೆ ಎಲ್ಲಿಲ್ಲದ ಸಿಟ್ಟುಬರುತ್ತಿತ್ತು. "ಮಣ್ಣಿನಲ್ಲಿ ಬೆಳೆದು ಸಿಕ್ಕಿದುದೆಲ್ಲಾ ನಿಮಗೆ ಕೂಲಿ ಕೊಡಲು ಬೇಕಾ ಗುತ್ತದೆ. ನಿಮಗೆ ಕೂಲಿ ಕೊಟ್ಟು ಇದ್ದುದೆಲ್ಲಾ ಮುಗಿಯಿತು. ನಿಮಗೆ ನಿಮ್ಮ ಯೋಚನೆ ಮಾತ್ರ. ಹೊಟ್ಟೆ ತುಂಬಿಸಲಿಕ್ಕಾಗಿ ಬರುತ್ತೀರಿ. ಬೆಳಗ್ಗೆ ಬಂದು ಸಾಯಂಕಾಲದ ವರೆಗೆ ದಿನಗಳೆದು ಕೂಲಿ ಮಾತ್ರ ಇಸಕೊಳ್ಳುತ್ತೀರಿ." ಎಂದು ರೇಗಿಬೀಳುತ್ತಿದ್ದರು. ಮೊದಮೊದಲು ಬೈದು ಅನಂತರವಾದರೂ ಕೂಲಿ ಕೊಡುತ್ತಿದ್ದರು. ಮತ್ತೆ ಕೆಲವು ದಿನಗಳ ನಂತರ ಇಂದಿಲ್ಲ ನಾಳೆ ನಾಡಿದು ಮತ್ತೊಮ್ಮೆ ಎಂದು ಕೂಲಿ ಯವರನ್ನು ಕುಣಿದಾಡಿಸಿ ಕೂಲಿ ಕೊಡತೊಡಗಿದರು. ಆದರೂ "ನಮ್ಮೊ ಡೆಯನ ಜಮೀನು, ನಾವು ದುಡಿಯಬೇಕು" ಎಂದು ಪದ್ಮನಾಭ ಭಟ್ಟ ರೊಂದಿಗೆ ದುಡಿದು ಕೂಲಿ ಕೇಳಿದಾಗ ಕೃಷ್ಣ ಭಟ್ಟರು ಸೋಲಿಸಿ ಬಿಟ್ಟರು. "ನಿಮಗೆಲ್ಲಾ ಕುಶಾಲು. ಬಂದು ಹಾಜರಿ ಕೊಟ್ಟರೆ ದುಡ್ಡು ಕೊಡಬೇಕು. ದುಡ್ಡು ಎಂದರೆ ಎಲ್ಲಿಂದ ಬರುತ್ತದೆ. ಹೇಗಾಗುತ್ತದೆ ಎಂಬ ಬಿಸಿ ನಿಮಗರಿಯದು. ಹೋಗಿರಿ, ನಡೆಯಿರಿ, ಓ ಅಲ್ಲಿ ಹೋಗಿ ಮರ ಅಲುಗಾಡಿಸಿ ಬನ್ನಿರಿ, ದುಡ್ಡು ಉದುರಿ ಬೀಳುತ್ತದೆ. ನಿಮಗೆ ಹೀಗೆ ಕೂಲಿ ಕೊಟ್ಟರೆ ನಾವು ಉಳಿಯಲಿಕ್ಕಿಲ್ಲ. ಊರಲ್ಲಿ ನಿಲ್ಲಲಿಕ್ಕಿಲ್ಲ. ನಿಮಗೆ ತಿರುಗಾಡಿದ್ದಕ್ಕೆ ಕೂಲಿ ಕೊಡಲಾರೆ. ಕಳ್ಳರು, ಘಟಿಂಗರು." ಎಂದು ಬೈದು ಭಂಗಿಸಿ ಕೂಲಿ ಕೊಡದಾದರು. ಎಷ್ಟೇ ಸ್ವಾಮಿನಿಷ್ಠ ರಾದರೂ ದುಡಿದ ಕೂಲಿ ಸಿಗದಿದ್ದರೆ ಹೊಟ್ಟೆಗೆ ಪೆಟ್ಟು ಬಿದ್ದರೆ ದುಡಿ ಯಲು ಬರುವರೇ? ಕೆಲಸಕ್ಕೆ ಜನರಿಲ್ಲದಾದರು. ಪದ್ಮನಾಭ ಭಟ್ಟರಿಗೆ ಈ ರೀತಿ ಆಸ್ತಿ ಹಾಳಾಗುತ್ತಿರುವುದು ನೋಡಲಾಗಲಿಲ್ಲ. ಒಂದು

ದಿನ ರಾತ್ರಿ ಊಟ ಕಳೆದ ನಂತರ ಮೆಲ್ಲನೆ ಅಣ್ಣನ ಬಳಿಗೆ ಸರಿದರು. "ಅಣ್ಣಾ!" ಎಂದು ಭಯಭಕ್ತಿ ಪೂರ್ವಕ ನುಡಿದರು.

"ಏನು" ಎಂದು ಕೃಷ್ಣ ಭಟ್ಟರು ಹುಬ್ಬು ಹಾರಿಸಿ ಕಣ್ಣು ಮಿಟುಕಿಸಿದರು.

"ನನ್ನದೊಂದು ಮಾತಿದೆ. ಕಿರಿಯವನಾದ ನಾನು ನಿಮಗನ್ನುವ ಯೋಗ್ಯತೆ ಪಡೆದಿಲ್ಲ. ಆದರೂ ಹೇಳುತ್ತಿರುವೆ. ನಮ್ಮ ಆಗುಹೋಗುಗಳು ಆಸ್ತಿಯಲ್ಲಿವೆ. ನಮ್ಮ ಹೊಲವನ್ನು ನಾವು ಸರಿಯಾಗಿ ನೋಡಿದರೆ ನಮ್ಮ ಬಾಳು ಸುಖಮಯ. ಅದನ್ನು ಬಡವಾಗಿರಿಸಿದರೆ ನಾವೂ ಬಡವಾಗಬೇಕು. ತಂದೆಯವರಿರುವಾಗ ಬೇಕುಬೇಕಾದ ಕೆಲಸಗಳು ಆಗಿ ನಮ್ಮ ಜಮೀನು ಎಷ್ಟೊಂದು ಕಂಗೊಳಿಸುತ್ತಿತ್ತು. ಈಗ ಏನೂ ಇಲ್ಲ. ಮೊದಲಿನ ಕೃಷಿಯಿಂದಾಗಿ ಇನ್ನೊಂದು ವರುಷ ಫಲ ಬಂದರೂ ಮತ್ತೆ ಏನೂ ಸಿಗಲಾರದು. ತಂದೆಯವರು ಇದ್ದುದನ್ನು ಕಳೆಯಬಾರದು; ಜಮೀನನ್ನು ಸರಿಯಾಗಿ ನೋಡಿ ಕೃಷಿ ಮಾಡಿ ಅಭಿವೃದ್ಧಿಗೊಳಿಸಬೇಕು; ಎಂದಿಹರಲ್ಲ. ಹಣ ಬೇಕಾದಲ್ಲಿ ವಿನಿಯೋಗಿಸದೆ ಸಿಕ್ಕ ಸಿಕ್ಕೆಡೆಗಳಲ್ಲಿ ಹರಿಯಬಿಟ್ಟರೆ ನಮ್ಮ ಗತಿ ನಾಳೆ ಏನಾಗಬಹುದು. ಇಷ್ಟೊಂದು ದಿನ ಮರ್ಯಾದೆಯಲ್ಲಿ ದಿನಗಳೆದು ಸ್ವತಂತ್ರರಾದ ನಾವು ಇನ್ನೊಬ್ಬರೆದುರು ಕೈಜೋಡಿಸಿ ತಲೆ ಬಗ್ಗಿಸಿಕೊಂಡು ನಡೆಯುವುದಾದರೂ ಹೇಗೆ?" ಎಂದು ಪದ್ಮನಾಭ ಭಟ್ಟರರಿಕೆಮಾಡಿಕೊಂಡರು.

ಪದ್ಮನಾಭ ಭಟ್ಟರಿಂತೆನುವಾಗ ಕೃಷ್ಣ ಭಟ್ಟರಿಗೆ ಸಾವಿರಾರು ಚೇಳುಗಳು ಒಮ್ಮೆಲೆ ಕಡಿದಂತಾಯಿತು. ತಮ್ಮನನ್ನೊಮ್ಮೆ ದುರುಗುಟ್ಟಿ ನೋಡಿದರು. "ಮೆಣಸಿನಲ್ಲಿರುವ ಹುಳಕ್ಕೆ ಮೆಣಸೇ ಸಿಹಿ ಎಂಬಂತೆ ನಿನ್ನವಸ್ಥೆ. ನೀವು ಕಂಡುದು ತಿಳಿದುದು ಬರಿಯ ನೆಲ ಮಾತ್ರ. ವಿಚಾರ. ಶಕ್ತಿ ನಿನ್ನಂತಹರಿಗಿಲ್ಲ. ಈ ಜಮೀನಿನಲ್ಲಿ ಹೇರಳ ದುಡಿದರೆ ಧಾರಾಳ ಉತ್ಪತ್ತಿ ಸಿಗುತ್ತದೆ ನಿಜ. ಆದರೆ ಖರ್ಚು ಅಷ್ಟೇ ಮಾಡಬೇಕು. ಲೆಕ್ಕ ಹಾಕಿ ನೋಡಿದರೆ ಸಿಗುವ ಉತ್ಪತ್ತಿ ಖರ್ಚು ಮಾಡಿದುದಕ್ಕೆ ಸಾಲದು. ಆದುದರಿಂದ ಸ್ವಭಾವತಃ ಭೂಮಿಯಲ್ಲೆಷ್ಟು ಸಿಗಬಹುದೋ ಅಷ್ಟುಪಡೆದು

ಸುಮ್ಮನಿರಬೇಕು. ವಿಶೇಷ ಶ್ರಮ ನಿಷ್ಫಲ. ನಮ್ಮ ಸಾಹಸ ಶ್ರಮಗಳಿಂದ ಹಣವನ್ನು ಬೇರೆಡೆಯೂ ಉಪಯೋಗಿಸಿ ಲಾಭ ಪಡೆಯಬೇಕು. ಹತ್ತು ಪಾವಾಣೆ ಖರ್ಚು ಮಾಡಿ ಹನ್ನೊಂದು ಪಾವಾಣೆ ಉತ್ಪತ್ತಿ ಬೆಳೆಸಿಗುವ ಕೃಷಿಯು ಗುಟ್ಟರಿತ ನಾನು ಈರೀತಿ ಯೆಸಗಿರುವೆ. ಹಣ ಸಿಕ್ಕ ಸಿಕ್ಕೆಡೆಗಳಲ್ಲಿ ಹರಿಯ ಬಿಟ್ಟಿರುವೆನೆಂದೆನುವ ನೀನು ಶತ ಮೂಢ. ಈ ಲೋಕದಲ್ಲಿ ಆಸ್ತಿಪಾಸ್ತಿಗಳಿಂದೇನೂ ಫಲವಿಲ್ಲ. ಮುಖ್ಯ ಬೇಕಾದುದು ಜನರ ಬೆಂಬಲ ಜನರ ಬೆಂಬಲ ಪಡೆಯಲಿಕ್ಕಾಗಿ ನಾನೊಂದಿಷ್ಟು ಹಣ ಖರ್ಚು ಮಾಡಿರುವೆ. ಇನ್ನದರಿಂದ ಎಷ್ಟೊಂದು ಲಾಭ ಸುಖ ಸಂಪತ್ತುಗಳು ನಮಗೊದವಿ ಬರಲಿವೆಯೆಂಬುದನ್ನು ಕಣ್ಣಾರೆ ನೋಡಿ ಮೂಗಿಗೆ ಬೆರಳಿಟ್ಟುಕೊಳ್ಳುವವ ನೀನು. ನೀನೂ ನನ್ನಭಿಪ್ರಾಯಕ್ಕೆ ಸಮ್ಮತಿಸುವೆಯಾದರೆ ಸರಿಯಾಯಿತು. ಇಲ್ಲವಾದರೆ ಬೇಡ. ಇಟ್ಟ ಹೆಜ್ಜೆ ಹಿಂದೆ ಸರಿಸುವವನು ನಾನಲ್ಲವೆ"ಂದು ಕೃಷ್ಣ ಭಟ್ಟರು ಪ್ರತಿಯಾಗಿ ಪದ್ಮನಾಭ ಭಟ್ಟರಿಗೊರೆದುಪದೇಶ ಮಾಡಿಬಿಟ್ಟರು.

ಕೃಷ್ಣ ಭಟ್ಟರ ಮನವರಿಯಲಾಗಿ "ನಿಮ್ಮ ಯೋಚನೆಯೇನು?" ಎಂದು ಪದ್ಮನಾಭ ಭಟ್ಟರು ಪ್ರಶ್ನಿಸಿದರು.

"ಈಗ ನಮ್ಮೊಡನಿರುವ ಹಣವನ್ನು ವ್ಯಾಪಾರಕ್ಕೆ ಹಾಕಬೇಕು. ಹಲವಾರು ಜನರ ಸ್ನೇಹ ಒಡನಾಟಗಳು ನನಗಿರುವುದರಿಂದ ಹೆಚ್ಚಿನ ಜನರು ನಮ್ಮಿಂದಲೇ ಅಗತ್ಯದ ಸಾಮಾನುಗಳನ್ನು ಕೊಂಡುಕೊಳ್ಳುವರು. ವ್ಯಾಪಾರದಲ್ಲಿ ನಾವು ಮೇಲೆ ಬಂದಾಗ ಈ ಗಣೇಶ ಕಮ್ತಿಗಳೇ ಮೊದಲಾದವರು ಹಲ್ಲುಕಿರಿದು ಮೇಲೆ ನೋಡಬೇಕು; ದಿವಾಳಿ ಯಾಗಬೇಕು. ಧಾರಾಳ ಸಾಮಾನುಗಳು ನಮ್ಮಲ್ಲಿರಬೇಕು. ಯಾವ ಬಗೆಯ ಸಾಮಾನೇ ಆದರೂ ನಮ್ಮಲ್ಲಿಲ್ಲದಾಗಬಾರದು. ಮತ್ತೆ ನೋಡು. ಇಂತಹ ಆಸ್ತಿ ಒಂದಲ್ಲ ಹತ್ತಿಪ್ಪತ್ತು ಬೇಕಾದರೂ ಮಾಡಿಕೊಳ್ಳುವ ಶಕ್ತಿ ನಮಗೆ ಬರುತ್ತದೆ. ಏನನ್ನುವೆ?"

"ನಿಮ್ಮ ಯೋಚನೆ ಸರಿಯಲ್ಲವೆನ್ನಲಾರೆ. ವ್ಯಾಪಾರದಲ್ಲಿ ಲಾಭವಿದೆಯೆಂಬುದನ್ನು ಒಪ್ಪಿಕೊಳ್ಳುವೆ. ಆದರೆ ಬರಿಯ ಊರ್ಧ್ವ ದೃಷ್ಟಿ

ಯಾದರೆ ಕೆಳಗಡೆ ಹೊಂಡವಿದ್ದರೆ ಕಾಣಲಾರದು. ಹಳ್ಳಿಯಲ್ಲಿ ವ್ಯಾಪಾರ ಮಾಡಬೇಕಾದರೆ ಒಳ್ಳೆಯ ಚಾಕಚಕ್ಯತೆ ಬೇಕು. ಲಾಭ ಪಡೆಯ ಬೇಕಾದರೆ ನಸೀಬು (ಪುಣ್ಯ) ಬೇಕು. ಹಳ್ಳಿಯ ವ್ಯಾಪಾರ ಸಾಲಕೊಡದೆ ನಡೆಯಲಾರದು. ಸಾಲಕೊಟ್ಟರೆ ವಸೂಲಾಗುವುದು ಕಷ್ಟ. ಅಥವಾ ವಸೂಲಾಗಬೇಕಾದರೆ ಪುನರ್ಜನ್ಮ ಪಡೆಯಬೇಕು. ನಗದಿ ವ್ಯಾಪಾರಕ್ಕೆ ಹೊರಟರೆ ನೊಣಸಹ ಬರಲಿಕ್ಕಿಲ್ಲ. ಇದ್ದ ಹಣ ಸಾಮಾನಿಗೆ ಹಾಕಿ ಜನರ ಕೈಯಲ್ಲಿ ಕೊಟ್ಟುಬಿಟ್ಟರೆ ಮತ್ತೆ ಬೋಳೆಣ್ಣೆಯೇ ಗತಿ." ಎಂದು ಪದ್ಮನಾಭ ಭಟ್ಟರಂದ ಈ ಮಾತು ಕೃಷ್ಣ ಭಟ್ಟರಿಗೆ ಕಹಿಯೌಷಧ ಕುಡಿದಂತಾಯಿತು.

"ನೀನೊಬ್ಬ ಶತಮೂರ್ಖ. ಅವಿವೇಕಿಗಳು ನಷ್ಟ ಹೊಂದಿದರೆಂದು ವ್ಯಾಪಾರ ನಮಗೆ ಬೇಡವೆನ್ನುವುದೇ? ನಿನಗೇನೂ ವ್ಯಾಪಾರದ ಮಾಹಿತಿ ಸಾಲದು. ಕುಣಿಯಲರಿಯದ ನರ್ತಕಿ ಅಂಗಳ ಸರಿಯಿಲ್ಲವೆಂಬಂತೆ ನಿನ್ನನಿಷ್ಠೆ. ಬಾಯಲ್ಲಿ ನುಡಿದೇನು ಫಲ. ವ್ಯಾಪಾರ ಮಾಡಿ ಲಾಭಪಡೆದು ನಿನ್ನ ಬಾಯಲ್ಲಿ ನೀರು ಸುರಿಯುವಂತೆಸಗದಿದ್ದರೆ ನಿನ್ನಣ್ಣ ಕೃಷ್ಣ ಭಟ್ಟನೇ ಅಲ್ಲವೆಂದು ತಿಳಿ" ಎಂದು ಕೃಷ್ಣ ಭಟ್ಟರು ಶಪಥಪೂರ್ವಕ ನುಡಿದರು.

"ಹೇಳಿ ಫಲವಿಲ್ಲದಿರಲು ನಾಲಿಗೆಗೆ ಕೆಲಸವನ್ನೇಕೆ ಕೊಡಲಿ" ಎಂದು ತಮ್ಮ ಸುಮ್ಮಗಾದರು.

ಕೃಷ್ಣ ಭಟ್ಟರಿಗೆ ಯೋಚಿಸಿದ ಕೆಲಸ ಬಹು ಬೇಗನೆ ಆಗದಿದ್ದರೆ ಮನಕೇಳದು. ಕೆಲವೇ ದಿನಗಳಲ್ಲಿ ವ್ಯಾಪಾರದ ಕಸುಬಿಗೆ ಕೈಹಾಕಿ ದರು. ರಸ್ತೆಯ ಬದಿಯ ಕಟ್ಟೋಣವೊಂದನ್ನು ಬಾಡಿಗೆಗೆ ಪಡ ಕೊಂಡರು. ಅಂಗಡಿಯಲ್ಲಿ ಹಿಡಿಯುವಷ್ಟು ಸಾಮಾನು ತುಂಬಿಸಿದರು. ಅಂಗಡಿಗೆ "ಜನಹಿತ ಸ್ಟೋರ್ಸ್" ಎಂದು ನಾಮಕರಣ ಮಾಡಿದರು. ಶುಭ ಮುಹೂರ್ತದಲ್ಲಿ ವ್ಯಾಪಾರ ಪ್ರಾರಂಭಿಸಿದರು. ಗೆಳೆಯರಿಗೆಲ್ಲಾ ಟೀಪಾರ್ಟಿಯಿತ್ತರು. ಬಟ್ಯಪ್ಪನನ್ನೂ ಕೆಂಚ ಗೌಡರನ್ನೂ ಸಹಾಯಕ ರನ್ನಾಗಿ ಮಾಡಿಕೊಂಡರು. ಕೃಷ್ಣ ಭಟ್ಟರು ಮ್ಯಾಲಿಕರು. ಕೆಂಚ

ಗೌಡರು ಮಾರಾಟ ಮಾಡುವವರು (ಸೇಲ್‌ಮೇನ್) ಬಟ್ಟೆಪ್ಪ ಅಳತೆ ತೂಕ ಮೊದಲಾದುವನ್ನು ಮಾಡುವವ.

"ಜನಹಿತ ಸ್ಟೋರ್ಸ್"ನಲ್ಲಿ ಎಲ್ಲೆಡೆಗಳಿಂತಲೂ ಸಾಮಾನುಗಳಿಗೆ ಅಗ್ಗ ಬೆಲೆ. ಸಾಮಾನುಗಳೆಲ್ಲಾ ಖಾತ್ರಿ ಮಾಲಿನವು. ಯಾವುವು ಬೇಕಾದರೂ ಇವೆ. ಹೊಸ ಅಂಗಡಿ ಹೇಗಿದೆ? ನೋಡಿ ಬಿಡುವ ಎಂದು ಕೆಲಜನರು ಮೊತ್ತಮೊದಲು ಬಂದರು. ಎಲ್ಲಿ ಸಾಮಾನು ಗಳಿಗೆ ಬೆಲೆ ಅಗ್ಗವೋ ಅಲ್ಲಿಗೆ ಜನರು ಬರುವುದು ಸಹಜ. ಪ್ರಚಾರ ವಾಗಿ ಗಿರಾಕಿಗಳು ಬರತೊಡಗಿದರು. ಬಂದ ಗಿರಾಕಿಗಳೊಡನೆ ಕೆಂಚ ಗೌಡರೂ ಕೃಷ್ಣ ಭಟ್ಟರೂ ನಗುಮುಖದಿಂದ ಮಾತನಾಡುತ್ತಿದ್ದರು. ಕೃಷ್ಣ ಭಟ್ಟರು ಯೋಗ್ಯರೆನಿಸಿದವರಿಗೆ, ಸಂಭಾವಿತರಿಗೆ ಕಾಫಿ ತರಿಸಿ ಕೊಡುತ್ತಿದ್ದರು. ಸ್ನೇಹಸಂಪರ್ಕಗಾಢವಾಗಿ ಬೆಳೆವಂತೆಸಗುತ್ತಿದ್ದರು. "ಹಳ್ಳಿಗಳಲ್ಲಿ ಲಾಭಬಡಕರು ಅಂಗಡಿಯಿಟ್ಟು ಜನರನ್ನು ಸುಲಿಗೆ ಮಾಡು ತ್ತಾರೆ. ಅನ್ಯಾಯವಾಗಿ ಊರವರ ರಕ್ತ ಈ ರೀತಿ ಹೀರುತ್ತಿರುವು ದನ್ನು ನೋಡಿ ನೋಡಿ ಬೇಸತ್ತು ನಾವು ವ್ಯಾಪಾರ ಪ್ರಾರಂಭಿಸಿದೆವು. ನಮ್ಮ ದೃಷ್ಟಿ ಕೇವಲ ಲಾಭ ಮಾತ್ರವಲ್ಲ. ಜನರ ಹಿತಸೌಕರ್ಯ ಗಳೇ ನಮ್ಮ ಉದ್ದೇಶ" ಎಂದು ಮೊದಲಾಗಿ ಕೃಷ್ಣ ಭಟ್ಟರು ತಮ್ಮ ಅಂಗಡಿಯ ವಿಷಯ ಪ್ರಚಾರಮಾಡುತ್ತಿದ್ದರು, ಒಡಾಯಿ ಕೊಚ್ಚಿ ಕೊಳ್ಳುತ್ತಿದ್ದರು. ಬಂದ ಗಿರಾಕಿಗಳು ತಲೆಯಲ್ಲಾಡಿಸಿ "ಹೌದು ಹೌದು ಹಾಗೆಯೇ ಬೇಕಾದುದು" ಎಂದನ್ನುತ್ತಿದ್ದರು. ಯಾವ ಸಾಮಾನು ಬೇಕೋ ಆ ಸಾಮಾನು ನಮ್ಮಲ್ಲಿದೆ. ಪೇಟೆಯಲ್ಲಿ ಇಂತಿಂತಹ ಸಾಮಾನುಗಳಿಗೆ ಇಂತಿಷ್ಟು ಬೆಲೆ, ಅದರ ಸಾಗು ಮಜೂರಿ ಇಷ್ಟು, ಸೇಲ್‌ಟೇಕ್ಸ್ ಇಷ್ಟು. ನಮಗದರಲ್ಲಿ ಇಷ್ಟು ಸಿಕ್ಕಿದರೆ ಸಾಕು. ಎಂದು ತಮ್ಮ ಪ್ರಾಮಾಣಿಕತೆಯನ್ನು ಸ್ವಲ್ಪ ಪ್ರತಿ ಷ್ಠಿತರೆಂದು ತೋರುವ ಜನರಿಗೆ ಹೇಳಿ ಮೆಚ್ಚಿಸುತ್ತಿದ್ದರು. ಕಟ್ಟಕಡೆಗೆ "ನೀವೆಲ್ಲ ನಮಗೆ ಬೇಕಾದವರು. ಯಾವಾಗಲೂ ನಮ್ಮಲ್ಲಿಗೆ ಬರ ಬೇಕಾದವರು. ನಿಮ್ಮ ಮುಖ ನಮಗೆ ನಮ್ಮ ಮುಖ ನಿಮಗೆ ಯಾವಾ ಗಲೂ ಕಾಣುತ್ತಿದೆ. ಲಾಭ ಬೇಡ. ಅಸಲು ಸಿಕ್ಕಿದರೆ ಸಾಕು."

ಎಂದು ಅಸಲಿಗೂ ಸಾಮಾನು ವಿಕ್ರಯಿಸುತ್ತಿದ್ದರು. ಮೊತ್ತಮೊದಲು ಸ್ವಲ್ಪ ನಷ್ಟವಾದರೂ ಚಿಂತಿಲ್ಲ. ಜನರು ಧಾರಾಳ ನಮ್ಮಲ್ಲಿಗೆ ಬಂದಾಗ ಈ ನಷ್ಟವೆಲ್ಲಿಯದು? ಸಮುದ್ರಕ್ಕೆ ಒಂದು ಹನಿ ಹುಳಿ ನೀರು ಬಿದ್ದ ಹಾಗಲ್ಲವೇ? ಎಂದು ಮನಗಂಡು ಸ್ವಲ್ಪ ಸ್ವಲ್ಪ ನಷ್ಟಹಾಕಿಯೂ ಸಾಮಾನುಗಳನ್ನೀಯುತ್ತಿದ್ದರು. ಹೀಗಾಗಿ "ಜನಹಿತ ಸ್ಟೋರ್ಸ್"ನಲ್ಲಿ ಜನರ ತಿಕ್ಕಾಟ ತಪ್ಪಿದುದಲ್ಲ. ಮೊದಮೊದಲು ನಗದಿ ವ್ಯಾಪಾರವೆಂದೇ ನಿಶ್ಚಯವಾಗಿದ್ದರೂ ಊರವರಿಗೆ ಪರಿಚಿತರಿಗೆ ಸಾಲಕೊಡದಿದ್ದಲ್ಲಿ ಇನ್ನಾರಿಗೆ ಕೊಡುವುದು? ಮುಗ್ಗಟ್ಟು ಜನರಿಗೆ ಸ್ವಾಭಾವಿಕ. ಇಂದಲ್ಲ, ನಾಳೆ ಅಥವಾ ಮತ್ತೊಮ್ಮೆ ಕೊಡುವೆವೆಂದೆನುವ ಬೆಣ್ಣೆಯಂತೆ ನುಣ್ಣಗೆ ಮಾತನಾಡುವವರಿಗೆ ಕಡವೂ ಸಿಗುತಿತ್ತು. ಕಡ ಕೊಂಡುಹೋಗುವ ಗಿರಾಕಿಗಳು ಧಾರಾಳ. ನಗದಿ ಕೊಡುವ ಗಿರಾಕಿಗಳು ಕೈ ಬೆರಳು ಮಡಚುವಷ್ಟೆಂದೂ ಆಯಿತು. ಅಂತೂ "ಜನಹಿತ ಸ್ಟೋರ್ಸ್"ನ ವ್ಯಾಪಾರ ಅಂದರೆ "ಭಲೇ ಭೇಷ್" ಎಂದೆನುವಂತಾಯಿತು.

ಕೃಷ್ಣ ಭಟ್ಟರು ಹೊಸತಾಗಿ ತೆರೆದ ಅಂಗಡಿಯಿಂದಾಗಿ ಗಣೇಶ ಕಮ್ತಿಗಳ ವ್ಯಾಪಾರ ಇಳಿಮುಖವಾಯಿತು. ಅತ್ಯಂತ ಹೊಂದಿಕೆಗೊಂಡ ಕೆಲವೊಂದು ಕುಳವಾರುಗಳ ಜನರು ಮಾತ್ರ ಗಣೇಶ ಕಮ್ತಿಗಳಲ್ಲುಳಿದರು. ತಮ್ಮ ವಹಿವಾಟಿಗೆ ಧಕ್ಕೆ ತಂದ ಕೃಷ್ಣಭಟ್ಟರ ಮೇಲೆ ಗಣೇಶ ಕಮ್ತಿಗಳಿಗೆ ಅಸೂಯೆ ಹುಟ್ಟಿತು. ತಮ್ಮಲ್ಲಿಗೆ ಬಂದವರೊಡನೆ "ಕೃಷ್ಣ ಭಟ್ಟರ ವ್ಯಾಪಾರ ಕಡೆತನಕ ಬಾಳಿ ಉಳಿಯುವಂತಹುದಲ್ಲ. ಅದು ವ್ಯಾಪಾರವಲ್ಲ; ಹುಚ್ಚಾಟ. ಅನುಭವವಿಲ್ಲದ ಒಂದು ಹಾರಾಟ. ನಾವು ವ್ಯಾಪಾರಕ್ಕೆ ತೊಡಗಿದುದು ಇಂದು ನಿನ್ನೆಯಲ್ಲ. ವ್ಯಾಪಾರ ಮಾಡುವಂತೆ ಮಾಡದಿದ್ದರೆ ನಾಲ್ಕೇ ದಿನಗಳಲ್ಲಿ ಅಂಗಡಿಯ ಬಾಗಿಲು ಮುಚ್ಚಬೇಕಾಗಿ ಬರುವುದು ಖಂಡಿತ. ಹೀಗೆ ಎಷ್ಟು ದಿನ ಕೃಷ್ಣ ಭಟ್ಟರ ವ್ಯಾಪಾರ ನಡೆಯುವುದೆಂದು ನೋಡುವ. ನಷ್ಟ ಹಾಕಿ ವ್ಯಾಪಾರ ಮಾಡಿ ಕಟ್ಟಕಡೆಗೆ ಆಸ್ತಿ ಕ್ರಯಚೀಟು ಕೊಡಬೇಕಾದ ಕಾಲ ಬಂದೀತು." ಎಂದು ಗಣೇಶ ಕಮ್ತಿಗಳು ಕೃಷ್ಣ ಭಟ್ಟರ ವ್ಯಾಪಾರದ ವಿಷಯವಾಗಿ ನುಡಿಯುತ್ತಿದ್ದರು. ಈ ಸುದ್ದಿಯನ್ನು ಯಾರೋ ಕೃಷ್ಣ ಭಟ್ಟರ ಕಿವಿಗೆ

ತಲಪಿಸಿದರು. "ಊರವರನ್ನು ಸುಲಿದು ಹೊಟ್ಟೆ ಡೊಳ್ಳಾಗಿಸಿಕೊಂಡ ಕಮ್ತಿಗಳಿಗೆ ನನ್ನ ನ್ಯಾಯಸಮ್ಮತವಾದ ವ್ಯಾಪಾರ ನೋಡಿ ಹೊಟ್ಟೆಕಿಚ್ಚು ಬಾರದಿದ್ದೀತೇ? ಒಂದಕ್ಕೆರಡು ಮೂರು ನಾಲು ಹೆಚ್ಚು ಹೇಳಿ ಸೋಲಿಸುವ ರಕಾರಿ ಮಾಲೀಯುವ ತನ್ನಂಗಡಿಗೆ ನರಹುಳ ಇನ್ನಲೆದಾಡಲಾರದಲ್ಲ ಎಂದು ಏನೇನಾದರೂ ಗಳಹುತ್ತಾರೆ. ಊರವರಿರಲಿ. ಸುಳ್ಳು ಲೆಕ್ಕ ಹೇಳಿ ಬರೆದು ತೋರಿಸಿ ಇನ್ಕಮ್ ಟೇಕ್ಸಿಗೆ ತಪ್ಪಿಸಿ ಸರಕಾರಕ್ಕೂ ದ್ರೋಹವಂಚನೆಗಳನ್ನೆಸಗುತ್ತಾರೆ. ಸಿಕ್ಕ ಸಿಕ್ಕವರ ಹೆಸರಲ್ಲಿ ಸಾಮಾನು ತಂದು ಅಂಗಡಿಯಲ್ಲಿ ಮಾರಿ ಲಾಭಪಡೆವ ವೃತ್ತಿಯವರದು. ಶುದ್ಧ ಜಂಬುಕ ನೀತಿಯಿದು. ಸರಕಾರವಿದನ್ನರಿತರೆ ಜೈಲಿಗೆ ಕಮ್ತಿಗಳು ಹೋಗಬೇಕಾದೀತು. ಗುಟ್ಟು ಬಯಲಾದಲ್ಲಿ ಊರವರಿಂದ ಥೂ ಎನ್ನಿಸಿಕೊಳ್ಳುವುದಲ್ಲದೆ ದಂಡಸಹ ತೆರಬೇಕಾಗಿ ಬಂದೀತು. ಕೃಷ್ಣ ಭಟ್ಟರ ವಿಷಯ ಏನಾದರೂ ಹೇಳುವುದಿದ್ದರೆ ನಾಲಿಗೆ ಬಿಗಿಹಿಡಕೊಳ್ಳಲಿ." ಎಂದು ಕೃಷ್ಣ ಭಟ್ಟರಾಗ ನುಡಿಯುತ್ತಿದ್ದರು. ಈರೀತಿ ಒಳಗೊಳಗೆ ಗಣೇಶ ಕಮಿಗಳಿಗೂ ಕೃಷ್ಣ ಭಟ್ಟರಿಗೂ ಹೊಗೆಸುತ್ತಿ ದ್ವೇಷಾಗ್ನಿ ಪ್ರಜ್ವಲಿಸುವ ಲಕ್ಷಣ ತಲೆದೋರಿತು.

ಗಣೇಶ ಕಮ್ತಿಗಳು ಎಷ್ಟೋ ಸಮಯದಿಂದ ಆ ಊರಲ್ಲಿ ವ್ಯಾಪಾರ ಮಾಡಿದವರು. ಹಲವಾರು ಆಢ್ಯಗೃಹಸ್ಥರ ನಿಕಟಸಂಬಂಧ ಅವರಿಗಿತ್ತು. ಬೇರೆಯವರ ಹೆಸರಲ್ಲಿ ಸಾಮಾನು ತರುವುದೂ ಲಾಭ ಪಡೆಯುವುದೂ ಸತ್ಯವಾಗಿತ್ತು. ಅವರು ಜನರ ಹೃದಯವನ್ನು ತಮ್ಮೆಡೆ ಗೊಳಿಸಿಕೊಳ್ಳುವುದರಲ್ಲಿ ಬಲು ನಿಷ್ಣಾತರಾಗಿದ್ದರು. ಆದುದರಿಂದ ಯಾವ ವಿಷಯದಲ್ಲೇ ಆದರೂ ಅವರಿಗೆ ಸಹಕರಿಸುವ ಜನರೂ ಇದ್ದರು. ವ್ಯಾಪಾರದಲ್ಲೇ ಮುಳುಗಿ ಈಜಿದ ಜೀವವವರದಾಗಿದ್ದುದರಿಂದ ಸರಕಾರದಲ್ಲಾಗಲಿ ಇನ್ನಿತರರಲ್ಲಾಗಲಿ ಅವರು ಸಿಕ್ಕಿಬೀಳುವ ಸಂಭವವಿರಲಿಲ್ಲ. ಹಾಗಾಗಿ ಕೃಷ್ಣ ಭಟ್ಟರು ಗಣೇಶ ಕಮ್ತಿಗಳಿಗೆ ವಿರೋಧವಾಗಿ ಸರಕಾರಕ್ಕೆ ತಳ್ಳಿ ಅರ್ಜಿ ಹಾಕಿದುದರ ಫಲವಾಗಿ ಬಂದ ಆಫೀಸರರು ಎಷ್ಟು ಪರಿಶೋಧನೆ ನಡೆಸಿದರೂ ಗಣೇಶ ಕಮ್ತಿಗಳು ಸಿಕ್ಕಿಬೀಳಲಿಲ್ಲ. ತನಿಖೆಯ ಕಾಲಕ್ಕೆ ಹಲವಾರು ಆಢ್ಯ ಮಹನೀಯ

ರನ್ನೂ ವಿಚಾರಿಸಬೇಕಾಗಿ ಬಂತು. ಅದರಿಂದಾಗಿ ಪ್ರತಿಷ್ಠಿತರೆಂದೆನಿಸಿಕೊಂಡ ಗಣೇಶ ಕಮ್ತಿಗಳ ಪಕ್ಷಪಾತಿಗಳ ನಿರೋಧವನ್ನೂ ಕೃಷ್ಣ ಭಟ್ಟರು ಪ್ರತ್ಯಕ್ಷ ಎದುರಿಸಬೇಕಾಯಿತು. ಆದರೂ "ನನಗೇನೂ ಹೆದರಿಕೆಯಿಲ್ಲ. ನ್ಯಾಯಮಾರ್ಗದಲ್ಲಿ ಪ್ರಾಮಾಣಿಕತನದಿಂದ ನಡೆಯುತ್ತಿರುವೆನು; ಸತ್ಯಕ್ಕೆ ಜಯವಿದೆ; ನನಗೆಂದಿಗೂ ಸೋಲು ಬರಲಾರದು" ಎಂದು ಕೃಷ್ಣ ಭಟ್ಟರು ಎದೆತಟ್ಟಿ ಹೇಳುತ್ತಿದ್ದರು.

ಅಂಗಡಿಯೊಂದಿಗೆ ಕೃಷ್ಣ ಭಟ್ಟರ ಕುಶಾಲುಗಾರಿಕೆಯೂ ಮಿತಿ ಮೀರಿತು. ಕೃಷ್ಣ ಭಟ್ಟರು ಮನೆಯಲ್ಲಿರುವುದೇ ಅಪರೂಪವಾಯಿತು. ಜೂಜುಗಾರರು ರಾತ್ರಿಹೊತ್ತಿನಲ್ಲಿ ಕೃಷ್ಣಭಟ್ಟರಂಗಡಿಯನ್ನೇ ಜೂಜಾಟಕ್ಕೆ ಯೋಗ್ಯವಾದ ಸ್ಥಳವಾಗಿ ಆರಿಸಿದರು. ಇದರಿಂದಾಗಿ ಕೃಷ್ಣ ಭಟ್ಟರು ಮನೆಯೆಡೆಗೆ ಬರುವುದು ನಡುರಾತ್ರಿ ಕಳದಾಗ, ಒಮ್ಮೊಮ್ಮೆ ಬಾರದಿದ್ದರೂ ಆಯಿತು. ಊರಲ್ಲಿ ಹೆಸರಾಂತ ಚೆಲುವೆಯರಾದ ಕಾಂತಮ್ಮ ಸರಳೆಯರು ಕೃಷ್ಣಭಟ್ಟರಂಗಡಿಗೆ ಸಾಮಾನಿಗೆ ಬರತೊಡಗಿದರು. ಸಾಮಾನು ಪಡೆಯಲು ಬರುವ ನೆವದಲ್ಲಿ ಕೃಷ್ಣ ಭಟ್ಟರ ಮೇಲೆ ಬಲೆಬೀಸತೊಡಗಿದರು. ಕೆಂಚಗೌಡರು ಮೊದಲೇ ಆ ಚೆಲುವೆಯರಗೆಳೆಯರಾಗಿದ್ದರು ಕೆಂಚಗೌಡರು ಅವರ ಪರಿಚಯ ಕೃಷ್ಣಭಟ್ಟರಿಗೆ ಹೇಳಿದರು. 'ಜನಹಿತ ಸ್ಟೋರ್ಸ್'ನ ಮಾಲೀಕರೂ ಸೇಲ್ಮೇನುಗಳೂ ಅವರ ಬಲೆಯೊಳಗಾದರು. ಇವರ ಮೇಲೆ ಅವರ ಅಧಿಕಾರ ನಡೆಯುತೊಡಗಿತು ಕೃಷ್ಣಭಟ್ಟರವರೊಡನೆ ಚಕ್ಕಂದ ಹೊಡೆಯುತ್ತಾ ಸಾಮಾನು ಬೇಕಾದಾಗ ಅವರಿಗೆ ಕೈತುಂಬಾ ಬಾಚಿ ಬಾಚಿ ಕೊಡುತ್ತಿದ್ದರು. ಕೆಂಚಗೌಡರಾಗಲಿ ಕೃಷ್ಣಭಟ್ಟರಾಗಲಿ ಅವರ ಮಟ್ಟಿಗೆ ಸಾಮಾನುಗಳನ್ನು ಅಳತೆ, ಯಾ, ತೂಕ, ಮಾಡಿಕೊಡದೆ ಕಣ್ಣಿನಂದಾಜಿನಲ್ಲಿ ಕೊಡುತ್ತಿದ್ದರು. ಕೃಷ್ಣ ಭಟ್ಟರ ಹೃದಯದಿಂದ ಲಲಿತೆಯನ್ನೊಂದೆಡೆಗೆ ಸರಿಸಿ, ಚೆಲುವೆಯರು ಬಲವಾಗಿ ಕಾಲೂರ ತೊಡಗಿದರು.

ಕೃಷ್ಣಭಟ್ಟರು ಅಂಗಡಿಯಲ್ಲಿ ಜುಗಾರಾಟವನ್ನಾಡುವುದನ್ನರಿತ ಗಣೇಶ ಕಮ್ತಿಗಳಿಗೆ ಒಂದು ಯೋಚನೆ ಥಟಕ್ಕನೆ ಹೊಳೆಯಿತು. ಅಕಸ್ಮಾತ್

ಜೂಗಾರಾಡುತ್ತಿರುವಾಗಲೇ ಪೋಲೀಸರು ಕೃಷ್ಣಭಟ್ಟರಂಗಡಿಗೆ ಧಾಳಿ ಯಿಟ್ಟರು. ಕೃಷ್ಣ ಭಟ್ಟರು ತುಂಬಾ ಉದಾರಿಗಳಾಗಿ ಕೈಸಡಿಲಿಸಿದುದ ರಿಂದ ಕಮ್ತಿಗಳ ಯೋಜನೆ ಮಣ್ಣುಗೂಡಿತು. ಬಂದ ಪೋಲೀಸರು ಕಣ್ಣುಮುಚ್ಚಿ ಹಿಂತಿರುಗಿದರು. ಸ್ವಲ್ಪಮಟ್ಟಿಗಾದರೂ ತಗಾದೆಕೊಟ್ಟೆ ನಲ್ಲಾ ಎಂದು ಕಮ್ತಿಗಳಿಗಾನಂದವಾಯಿತು. ಕೃಷ್ಣ ಭಟ್ಟರ ವ್ಯಾಪಾರ ವನ್ನು ಹೇಗಾದರೂ ಎತ್ತಿಹಾಕಬೇಕೆಂದು ಗಣೇಶ ಕಮ್ತಿಗಳು ಹೊಂಚು ಹಾಕತೊಡಗಿದರು. ಪದ್ಮನಾಭ ಭಟ್ಟರನ್ನು ಕಂಡು ಅವರ ಕಿವಿ ಚುಚ್ಚಿದರು. ಹೀಗೆಯೇ ಕೆಲವು ಸಮಯ ಕಳೆದರೆ ನಿಮ್ಮಪ್ಪ ಮಾಡಿಟ್ಟ ಬದುಕು ನೀರು ನೀರಾಗುವುದು ಖಂಡಿತ. ನೀವಾದರೂ ಅಣ್ಣನನ್ನು ಅಲುಗಾಡದಂತೆ ತುಸು ಬಿಗಿಹಿಡಿಯಬಾರದೇ? ಎಂದುಪದೇಶಿಸಿದರು. "ಏನು ಬೇಕಾದರೂ ಆಗಲಿ. ಈ ಲೋಕ ಶಾಶ್ವತವಲ್ಲ. ಆಸ್ತಿ ಹೋದರೆ ಹೋಗಲಿ. ಅಶಾಂತಿ ತಂದೊಡ್ಡಿ ಲೋಕಾಪವಾದಕ್ಕೆ ಬಲಿ ಬೀಳಲಾರೆ. ಮಾತನಾಡದಿದ್ದವನಿಗೆ ಜಗಳವಿಲ್ಲ. ಎಂದು ಪದ್ಮ ನಾಭ ಭಟ್ಟರು ಮೌನತಾಳಿದರು.

ಎಷ್ಟೇ ಸಾಮಾನು ತಂದು ತುಂಬಿಸಿದರೂ ನಾಲ್ಕೇ ದಿನಗಳಲ್ಲಿ ಕೃಷ್ಣಭಟ್ಟರಂಗಡಿಯಲ್ಲಿ ಖರ್ಚಾಗುತ್ತಿತ್ತು. ಹಣ ಮಾತ್ರ ಕೈಗೆ ಬರು ತ್ತಿರಲಿಲ್ಲ. ತಕ್ಕೊಂಡುಹೋಗಿ ಹೋಗಿ ಸಾಲ ಧಾರಾಳವಾದಾಗ ಕೃಷ್ಣ ಭಟ್ಟರು ಹಣ ಬೇಕಾಗಿತ್ತಲ್ಲ ಬೇಗನೆ ಕೊಡಬೇಕೆಂದಾಗ ಬೆನ್ನು ಹಾಕಿ ಹೋದವರು ಪುನಃ ಅಂಗಡಿಯೆಡೆಗೆ ಮುಖ ತಿರುಗಿಸದಾದರು. ಇಂತಹ ಜನರ ಸಂಖ್ಯೆ ದಿನೇದಿನೇ ಹೆಚ್ಚಾಗುತ್ತಿತ್ತು. ಚೆಲುವೆಯರು ಕೃಷ್ಣ ಭಟ್ಟರನ್ನು ಸ್ವರ್ಗಲೋಕದಲ್ಲಿ ವಿಹರಿಸುವಂತೆಸಗಿದುದರಿಂದ ಅವರ ಆವಶ್ಯಕತೆಗಳನ್ನು ಇವರು ಪೂರೈಸಬೇಕಾಗಿ ಬಂತು. ಜೂಗಾರಿ ಆಡುವ ಗೆಳೆಯರೊಡನಾಟದಿಂದ ಹಣ ಕೈಬಿಡುತ್ತಿತ್ತು. ಹೀಗೆಲ್ಲಾ ಆಗಿ ಆರ್ಥಿಕ ಮುಗ್ಗಟ್ಟು ತಲೆದೋರಿ ಬಲವಾಗತೊಡಗಿತು. "ಇಟ್ಟ ಹೆಜ್ಜೆ ಹಿಂದೆ ಸರಿಸುವುದು ಧೀರರ ಲಕ್ಷಣವಲ್ಲ. ಮೊತ್ತಮೊದಲು ನಷ್ಟಬಂದರೂ ಆದಾಯ ಬರಬಹುದಾದ್ದರಿಂದ ಸಾಲಕ್ಕೆ ಕೈಹಾಕಿ ಯಾದರೂ ಕೆಲಸ ಮುಂದರಿಸಬೇಕು" ಎಂದು ನಿಶ್ಚಯಿಸಿ ಕೃಷ್ಣ

ಭಟ್ಟರು ಹಣವಂತರೆನಿಸಿಕೊಂಡವರೊಡನೆ ಸಾಲಕೇಳಲುಪಕ್ರಮಿಸಿದರು. ಇದನ್ನರಿತ ಕವಿತ್ತಿಗಳು ಕೃಷ್ಣ ಭಟ್ಟರಿಗೆ ಸಾಲ ಕಡಗಟ್ಟು ಸಿಗದಂತೆ ಮಾಡಲು ವಿಶ್ವಪ್ರಯತ್ನ ಹೂಡಿದರು. ಯಾರೂ ಹಣ ವೀಯದಾದರು. ಕಟ್ಟಕಡೆಗೆ ದೇವಪ್ಪ ಗೌಡರು "ನೀವೂ ನಿಮ್ಮ ತಮ್ಮನೂ ಬರಹ ಮೂಲಕ ರಿಕಾರ್ಡು ಮಾಡಿಕೊಟ್ಟರೆ ಸ್ವಲ್ಪ ಮಟ್ಟಿಗೆ ಹಣಕೊಡಬಹುದು" ಎಂದರು. ಈಗ ತಮ್ಮನನ್ನೊಪ್ಪಿಸಿ ಸಾಲತೆಗೆಯು ವುದೇ ಕೃಷ್ಣ ಭಟ್ಟರ ಮುಖ್ಯ ಕೆಲಸವಾಗಿ ಪರಿಣಮಿಸಿತು. ಹಲವಾರು ಬಗೆಯ ಆಸೆ ತೋರಿಸಿ ನಯಭಯಗಳ ನುಡಿಗಳಿಂದ ಪದ್ಮನಾಭ ಭಟ್ಟರನ್ನು ತನ್ನೊಡನೆ ಸಾಲತೆಗೆಯಲು ರುಜುಹಾಕಲು ಪ್ರೋತ್ಸಾಹಿಸಿದರು. ಆದರೆ ಪದ್ಮನಾಭ ಭಟ್ಟರು ಒಪ್ಪಲಿಲ್ಲ, ಕಿವಿಗೊಡಲಿಲ್ಲ. "ತಂದೆಯವರಿರುವಾಗ ನಗದಾಗಿದ್ದ ಹಣವೂ ಸದ್ಯದ ಹುಟ್ಟೂ ಸಾಕಾಗದೆ ಇನ್ನು ಸಾಲಕ್ಕೆ ಕೈಹಾಕುವುದೆಂದರೇನು? 'ವಿನಾಶಕಾಲೇ ವಿಪರೀತ ಬುದ್ಧಿಃ' ಎಂದಿದೆಯಲ್ಲ. ಇದ್ದ ಮಣ್ಣನ್ನೂ ಕಳಕೊಳ್ಳುವ ಉದ್ಯೋಗಕ್ಕೆ ಕೈಹಚ್ಚಲಾರೆ" ಎಂದು ಪದ್ಮನಾಭ ಭಟ್ಟರು ಕಟುವಾಗಿ ನುಡಿದರು.

ತನ್ನ ಅಭಿಪ್ರಾಯಕ್ಕೆ ಸಮ್ಮತಿಸಿ ಸಹಕರಿಸದ ಪದ್ಮನಾಭ ಭಟ್ಟರು ನಿಜವಾಗಿಯೂ ತನಗೆ ಕಡುವೈರಿ. ಅವರಿಂದಲಾಗಿಯೇ ತನ್ನ ಕಾರ್ಯಗಳಿಗಿಷ್ಟು ತೊಂದರೆಯಾಗುತ್ತಿದೆ. ಇಂತಹ ವೈರಿಯ ಸಂಗಡ ಇದ್ದಲ್ಲಿ ಕುರುಡು ಕಾಸಿಗೂ ಗತಿಯಿಲ್ಲದಾಗುವುದು ಎಂದು ಭ್ರಮಿಸಿ ಕೃಷ್ಣ ಭಟ್ಟರು ಅನಾವಶ್ಯಕ ಆಗಾಗ ತಮ್ಮನ ಮೇಲೆ ರೇಗತೊಡಗಿದರು. ಅಲ್ಲಸಲ್ಲದ ಕಿರುಕುಳ ಪದ್ಮನಾಭ ಭಟ್ಟರಿಗೆ ತಂದೊಡ್ಡ ತೊಡಗಿದರು. ಪದ್ಮನಾಭ ಭಟ್ಟರು ಅಣ್ಣನ ಕಿರುಕುಳ ಸಹಿಸದೆ ಈ ಮನೆಯಲ್ಲೆಂತು ನಿಲ್ಲುವುದು ಎಂದು ಯೋಚಿಸ ತೊದಗಿದರು. ಇದು ಕಡೆಯ ಬಾರಿ ಎಂದು ಕೃಷ್ಣ ಭಟ್ಟರು ತಮ್ಮನನ್ನು ಸರ್ವ ಪ್ರಯತ್ನವನ್ನೂ ಉಪಯೋಗಿಸಿ ಸಾಲತೆಗೆಯಲು ಒತ್ತಾಯಿಸ ತೊಡಗಿದರು. "ನಾನು ನಿನ್ನ ಅಣ್ಣ, ತಂದೆಗೆ ಸರಿಸಮಾನ ; ಮನೆಯ ಯಜಮಾನ. ನಾನಂದುದಕ್ಕೆ ನೀನೊಪ್ಪಲೇಬೇಕು. ಇಲ್ಲವಾದರೆ ತನ್ನ ಕಾಲಿಗೆ ತಾನೇ ಕೊಡಲಿ ಎಳೆದು ಹಾಕಿ ಕೊಂಡಂತಾಗುವುದು ನಿನ್ನವಸ್ಥೆ" ಎಂದು ಬಲಾತ್ಕರಿಸ

ತೊಡಗಿದರು. "ತಂದೆಯವರಂತಿರುತಿದ್ದರೆ ಸಹಕಾರ ನೀಡುತ್ತಿದ್ದೆ" ಎಂದೊಂದೇನುಡಿ ಪದ್ಮನಾಭ ಭಟ್ಟರ ಮುಖದಿಂದ ಹೊರಟಿತು.

ಕೃಷ್ಣಭಟ್ಟರಿಗೆ ಉದ್ವೇಗ ಸಹಿಸದಾಯಿತು. "ನಿಮ್ಮದೆಲ್ಲಾ ನನಗೆ ಗೊತ್ತಿದೆ. ತೀರ್ಥರೂಪರ ಜೀವಿತಕಾಲದಲ್ಲವರನ್ನು ಮಂಕುಮಾಡಿ ಬಗಲೊಳಗಿರಿಸಿ ನನ್ನ ಸರ್ವನಾಶಕ್ಕೆ ಹೆಣಗಿದಿರಿ. ಈಗಲೂ ನೀವೆಲ್ಲರೂ ಒಟ್ಟುಕೂಡಿ ಅಲ್ಲನಲ್ಲದ ತೊಂದರೆ ತಂದೊಡ್ಡಿ ದೂರ ಓಡಿಸುವ ಯೋಚನೆ ಮಾಡುತ್ತಿರುವಿರಿ. ಈಗ ನಾನು ಸರ್ವಾಧಿಕಾರಿ. ನಿಮ್ಮಿಂದ ಸಾಧ್ಯವಿಲ್ಲ. ನಿಮ್ಮನ್ನು ಬೇಕಾದಂತೆ ವಳಗಿಸುವ ಶಕ್ತಿಸಾಮರ್ಥ್ಯಗಳೂ ಅಧಿಕಾರವೂ ನನಗುಂಟು. ಶಿಕ್ಷಿಸುವ ರಕ್ಷಿಸುವ ಭಾರ ನನ್ನದು. ಒಪ್ಪುವೆಯೋ ಇಲ್ಲವೋ ಹೇಳು" ಎಂದು ಕೆಂಪಾದ ಕಣ್ಣುಗಳಿಂದ ಕೆಂಡಕಾರಿದರು. ಸಿಟ್ಟಿನ ಭರದಲ್ಲಿ ತಾಳಮೇಳ ತಪ್ಪಿದವರಾಗಿ ಪದ್ಮನಾಭ ಭಟ್ಟರಿಗೆ ಹೊಡೆಯಲು ಕೈಯೆತ್ತಿ ಮುಂದಾದರು "ಜಾಗ್ರತೆ! ನಿಮ್ಮಂತೆ ನನಗೂ ಕೈ ಇದೆ. ಮೈಮುಟ್ಟದಿರಿ. ನನಗೂ ನಿಮ್ಮಷ್ಟೇ ಅಧಿಕಾರ ಇದೆ. ತಂದೆತಾಯಿಗಳಿಗೆ ನಾವೆಲ್ಲರೂ ಒಂದೇ ತರದ ಮಕ್ಕಳು, ಹಿರಿಯ ರಾಗಿ ಹುಟ್ಟಿದ ಮಾತ್ರಕ್ಕೆ ನಿಮಗೊಂದು ಕೋಡು ಹೆಚ್ಚಿಲ್ಲ" ಎನ್ನುತ್ತಾ ಪದ್ಮನಾಭ ಭಟ್ಟರು ನಿಂತಲ್ಲೇ ಕದಲದೆ ನಿಂತರು.

ಪದ್ಮಭಟ್ಟರಿಂತೆನುವಾಗ, ಕದಲದೆ ನಿಂತಾಗ ಕೃಷ್ಣ ಭಟ್ಟರು ತುಸು ಹಿಂದೆ ಸರಿದರು. "ಮುಚ್ಚುಬಾಯಿ. ತಂದೆಯವರು ಈ ಆಸ್ತಿಯಲ್ಲಿ ನಿನಗೇನೂ ಸಿಗಲಾರದೆಂದು ನನ್ನೊಡನಂದಿದ್ದರು. ಈಗ ಯಜಮಾನನಾದ ನಾನೂ ಉಳಿದವರಿಗನ್ನುವುದು ಅದೇ ಮಾತು. ಕುರುಡು ಕಡ್ಡಿ ಸಹ ನೀವೊಬ್ಬರಾದರೂ ಮುಟ್ಟದಂತೆ ನೋಡಿಕೊಳ್ಳು ವವ ನಾನು. ಮನೆಬಿಟ್ಟು ನಡೆ. ನಡೆಯದಿದ್ದರೆ ಕೊಂದುಹಾಕುವೆ" ಎಂದು ಗರ್ಜಿಸಿದರು. ತಮ್ಮನ ಕುತ್ತಿಗೆಗೆ ಕೈಹಾಕಿ ಹೊರದಬ್ಬಿದರು. ಹೊರಬಿದ್ದ ರಭಸಕ್ಕೆ ಪದ್ಮನಾಭ ಭಟ್ಟರು ಮುಗ್ಗರಿಸಿ ಬಿದ್ದರು. "ಹಿರಿಯಣ್ಣನಾದುದರಿಂದ ಕೈಯೆತ್ತಲಾರೆ. ಇನ್ನಿಲ್ಲಿ ನಿಂತರೆ ಸರ್ವ ನಾಶ" ಎಂದು ಪದ್ಮನಾಭ ಭಟ್ಟರು ಮನೆಬಿಟ್ಟು ಹೊರಟೇ ಬಿಟ್ಟರು.

## ಸುಳಿ ೮

ಕೃಷ್ಣ ಭಟ್ಟರ ಪತ್ನಿ ಲಲಿತೆ ಗರ್ಭಿಣಿಯಾಗಿದ್ದಳು. ಗರ್ಭಿಣಿಯರಿಗೆ ಸ್ವಭಾವತಃ ವಿಪರೀತ ಆಯಾಸ. ಕೆಲಸದ ಹೊರೆಹೊರುವುದಂತೂ ಕಷ್ಟಸಾಧ್ಯ. ಲಲಿತೆ ಇದ್ದೊಬ್ಬ ವೈದುನನೂ ಹೊರಟು ಹೋದ ನಂತರ ಮನೆಗೆಲಸ ಸಂಪೂರ್ಣ ನಿರ್ವಹಿಸಬೇಕು. ಕಾನನದಲ್ಲಿರುವಂತೆ ಏಕಾಕಿಯಾಗಿರಬೇಕು. ನಡುರಾತ್ರಿಯೋ ಇನ್ನಿತರ ಸಮಯದಲ್ಲಿ ಯಾವಾಗಲಾದರೂ ಆ ಸಮಯದಲ್ಲಿ ಬರುವ ಕೃಷ್ಣ ಭಟ್ಟರನ್ನುಪಚರಿಸಬೇಕು. ಅಂತೂ ಲಲಿತೆಗೆ ಸಾಕೋ ಸಾಕಾಗುತ್ತಿತ್ತು. ಏನಾದರೂ ಮನೆ ವಿಷಯ ಮಾತೆತ್ತಿದರೆ ಕೃಷ್ಣ ಭಟ್ಟರಿಗೆ ಸಿಟ್ಟು ಬರುತಿತ್ತು. "ಒಡೆಯ ತಂದಿತ್ತುದನ್ನು ತಿಂದು ಬಿದ್ದುಕೊಂಡಿರುವುದಲ್ಲದೆ ಹೆಂಗಸರಿಗೆ ಹೆಚ್ಚಿನಧಿಕಾರವೇನಿದೆ? ಮಾತ್ರೆತ್ತಬೇಡ" ಎಂದು ಲಲಿತೆಯನ್ನು ಬೆದರಿಸುತ್ತಿದ್ದರು. ಜಲಪೆಯರ ಒಡನಾಟಕ್ಕೆ ಮನಸೋತ ಕೃಷ್ಣಭಟ್ಟರಿಗೆ ಲಲಿತೆಯ ವಿಷಯವಾಗಿ ತಾತ್ಸಾರ ಮೂಡಿತ್ತು. "ಮನೆಯೊಂದು ಇದೆಯಲ್ಲ" ಎಂದು ಮಾತ್ರ ಬರುತ್ತಿದ್ದರಲ್ಲದೆ ಮನ ವಿದ್ದು ಬರುವುದಾಗಿರಲಿಲ್ಲ. ಲಲಿತೆ ದುಃಖದಲ್ಲಿ ಕಾಲಕಳೆಯತೊಡಗಿದಳು.

"ಮಗಳು ಲಲಿತೆ ಗರ್ಭಿಣಿ. ಸೀಮಂತ ಮಹೋತ್ಸವವನ್ನಾಚರಿಸಬೇಕು. ದಿನ ನಿಶ್ಚಯ ಮಾಡಬೇಕು" ಎಂದು ಶಂಭು ಭಟ್ಟರು ಕೃಷ್ಣಭಟ್ಟರಲ್ಲಿಗೆ ಪಯಣ ಬೆಳೆಸಿದರು. ಅಳಿಯನ ವಿಷಯವಾದ ವರ್ತಮಾನಗಳು ದೂರ ದೂರದಿಂದ ಶಂಭು ಭಟ್ಟರಿಗೆ ಕೇಳಿ ಬರುತ್ತಿದ್ದುವು. ಆದರೂ ನಿಜವನ್ನರಿಯುವೆನೆಂದು ಬರುವಾಗ ಗಣೇಶ ಕಮ್ತಿಗಳಲ್ಲಿಗಾಗಿ ಬಂದರು. ಗಣೇಶ ಕಮ್ತಿಗಳಿಗೂ ಶಂಭು ಭಟ್ಟರಿಗೂ ಮೊದಲಿನಿಂದಲೇ ತುಂಬಾ ಸ್ನೇಹವಿತ್ತು. ಗಣೇಶ ಕಮ್ತಿಗಳಿಗೆ ಕೃಷ್ಣ ಭಟ್ಟರಲ್ಲಿ ವೈಯಕ್ತಿಕ ದ್ವೇಷವಿದ್ದುದರಿಂದಲೂ ಶಂಭು ಭಟ್ಟರಲ್ಲಪಾರವಾದ ಸಲಿಗೆಯಿರುವುದರಿಂದಲೂ ಕೃಷ್ಣ ಭಟ್ಟರ ವಿಷಯವಾಗಿ ಇದ್ದ ಸಂಗತಿಗಳೆಲ್ಲಾ ಪ್ರವಾಹರೂಪವಾಗಿ ಹೊರಬಂದುವು. ಗಣೇಶ ಕಮ್ತಿ

ಗಳ ನುಡಿಯಿಂದಾಗಿ ಮಾವಯ್ಯನವರ ಮನ ಕೂಡ ಅಳಿಯನ ಮೇಲೆ ರೇಗುವಂತಾಯಿ. ಶಂಭು ಭಟ್ಟರು ವಿಷಯಗಳನ್ನೆಲ್ಲಾ ಮನದಲ್ಲೇ ಮಥಿಸತೊಡಗಿದರು. "ಅಳಿಯನಿಗೆ ಒುದ್ಧಿಹೇಳಿ ಸೀಮಂತ ಮಹೋತ್ಸವಕ್ಕೆ ಮುಹೂರ್ತ ನಿಶ್ಚಯಿಸಿ ಬರುವೆ"ನೆಂದು ಮಗಳ ಮನೆಗೆ ಕಾಲಿರಿಸಿದರು. ಕೃಷ್ಣ ಭಟ್ಟರು ಮನೆಯಲ್ಲಿರಲಿಲ್ಲ. ಲಲಿತೆ ಮಾತ್ರ ಇದ್ದಳು. ಲಲಿತೆಯ ಮೂಲಕವೂ ಶಂಭು ಭಟ್ಟರಿಗೆ ಅಳಿಯನ ವರ್ತನೆಗಳೆಲ್ಲಾ ತಿಳಿದು ಬಂದುವು. ಪದ್ಮನಾಭ ಭಟ್ಟರು ಮನೆಬಿಟ್ಟು ಹೊದ ವಿಚಾರ ನಡೆದ ವಾಗ್ವಾದ ಇವುಗಳನ್ನು ಸರಿಯಾಗಿ ತಿಳಿದ ಮೇಲೆ "ದೋಣಿ ನಡು ನೀರಿನಲ್ಲಿ ಮಗುಚಿ ಬಿತ್ತಲ್ಲ" ಎಂದು ನೆತ್ತಿಯ ಮೇಲೆ ಕೈಯಿಟ್ಟು ಶೋಕಿಸಿದರು. ಕೃಷ್ಣ ಭಟ್ಟರು'ಯಾವಾಗ ಬರುವರೆಂಬುದು ನಿಶ್ಚಯವಿಲ್ಲವಾದ್ದರಿಂದ ಕೂಲಿಯಾಳೊಬ್ಬನನ್ನು ಅವರನ್ನು ಬರಹೇಳಲು ಕಳುಹಿದರು. "ತಾನಳಿಯನಿಗೆ ಬುದ್ಧಿ ಹೇಳುವೆ. ನೀನು ಸಹ ಗಂಡನನ್ನು ಎಚ್ಚರಿಸಬೇಕು. ಹಟಹೂಡಬೇಕು. ಚೆಲುವೆಯರ ಮತ್ತು ಪುಂಡರ ಒಡನಾಟದಲ್ಲಿ ಬಿದ್ದು ಮುಳುಗಿ ಹೋದ ಕೃಷ್ಣ ಭಟ್ಟರನ್ನೆತ್ತಲು ಸಹಧರ್ಮಿಣಿಯಾದ ನೀನೂ ಸಹಕಾರ ನೀಡದಿದ್ದರೆ ಪರಿಣಾಮದಲ್ಲಿ ಅಳುವುದೊಂದೇ ಗತಿಯಾಗುವುದು" ಎಂದು ಶಂಭು ಭಟ್ಟರು ಕೃಷ್ಣ ಭಟ್ಟರು ಬರುವ ಮೊದಲೇ ಮಗಳಿಗೂ ತಾನರಿದ ಸಂಗತಿಗಳನ್ನರುಹಿ ಎಚ್ಚರಿಕೆಯಿತ್ತರು.

ಹೆಣ್ಣು ಕೊಟ್ಟ ಮಾವಯ್ಯ ಬಂದು ಕರೆದಾಗ ದಾಕ್ಷಿಣ್ಯಕ್ಕಾದರೂ ಹೋಗದಿದ್ದರಾಗುವುದೇ? ಪುರುಸೊತ್ತಿಲ್ಲವಾದರೂ ಆಳಿನೊಂದಿಗೆ ಕೃಷ್ಣ ಭಟ್ಟರು ಬಂದರು. ಹೊತ್ತು ಮೀರುವುದೆಂದು ಶಂಭು ಭಟ್ಟರ ಊಟೋಪಚಾರಗಳು ಅಳಿಯ ಬರುವಾಗ ಕಳೆದಿದ್ದುವು. ಸಾಂಗವಾಗಿ ಯೋಗ ಕ್ಷೇಮವಿಚಾರ ಕುಶಲ ಪ್ರಶ್ನೆಗಳು ಜರುಗಿದುವು. "ಊಟ ಮಾಡಿ ಬಾ! ಮತ್ತೆ ಮಾತನಾಡುವ" ಎಂದು ಶಂಭು ಭಟ್ಟರಂದಾಗ "ಈಗ ತಾನೆ ಕಾಫಿ ಕುಡಿದು ಬಂದೆ. ಹಸಿವಿಲ್ಲ. ಊಟ ಬೇಡ. ಮಾತನಾಡಲಿರುವುದನ್ನೆಲ್ಲಾ ಮಾತನಾಡಿ ಬಿಡುವ" ಅಂದರು ಕೃಷ್ಣ ಭಟ್ಟರು. ಶಂಭು ಭಟ್ಟರು ಸೀಮಂತ ಪ್ರಸ್ತಾಪವೆತ್ತಿದರು. ಆ ಸುದ್ದಿ ಕೃಷ್ಣ

ಭಟ್ಟರಿಗೆ ತುಂಬಾ ಅಸಹ್ಯವಾಯಿತು. "ದುಡ್ಡು ಹಾಳು ಮಾಡಲಿರುವ ಒಂದು ಉದ್ಯೋಗ" ಎಂದು ಮನದಲ್ಲಂದುಕೊಂಡರು. "ಮಾವಯ್ಯಾ! ಈ ಸೀಮಂತವೆಂಬುದು ಅಷ್ಟೊಂದು ದೊಡ್ಡ ಅಗತ್ಯದ ಕೆಲಸವಲ್ಲ. ನಂಟರಿಷ್ಟರೂ ಬ್ರಾಹ್ಮಣರೂ ಬಾಯಿ ಚಪ್ಪರಿಸಲಾಗಿ ಮಾಡುವ ಒಂದು ಔತಣ ಮಾತ್ರ. ಇದ್ದ ಅಕ್ಕಿ ಬೇಳೆ ಮೊದಲಾದ ಸಾಮಾನುಗಳನ್ನು ಸಿಕ್ಕಿಸಿಕ್ಕಿದವರಿಗೆ ತಿನ್ನಿಸುವುದಲ್ಲದೆ ಇದರಿಂದ ಪುರುಷಾರ್ಥವೇನೂ ಸಾಧಿಸುವ ಹಾಗೆ ಇಲ್ಲ. ಹಾಗೆ ತಿನ್ನಬೇಕೆಂದಾದರೆ ನಾವೇ ಕೂಡಿ ಬೇಕು ಬೇಕಾದ ಭಕ್ಷ್ಯ ತಯಾರಿಸಿ ತಿನ್ನುವ, ಬಯಕೆಗಳನ್ನು ತೀರಿಸುವ. ಈಗೀಗ ಸೀಮಂತವನ್ನು ಬಹು ಜನರು ಆಚರಿಸುವುದೂ ಇಲ್ಲ. ನಾವೂ ಆ ಸಾಲಿಗೆ ಸೇರಿಬಿಡುವ. ಸುಮ್ಮಗೆ ಇಲ್ಲದ ಹಣ ಖರ್ಚು ಮಾಡಿ ಭೂರಿಭೋಜನ ಮಾಡುವುದು ಬೇಡ ಎಂದು ನನ್ನ ಸಿದ್ಧಾಂತ" ಎಂದು ಕೃಷ್ಣ ಭಟ್ಟರಂದಾಗ ಶಂಭು ಭಟ್ಟರ ಮುಖ ಕಿರಿದಾಯಿತು. ಹಟ ಬಿಡಲಾರದಳಿಯನಿಗೆ ಹೇಳಿ ಫಲವಿಲ್ಲವೆಂದು ಮಾವಯ್ಯ ಸುಮ್ಮಗಾದರು. ಆ ಮೇಲೆ ಆ ಮಾತು ಈ ಮಾತುಗಳು ಬಂದು ಕೃಷ್ಣ ಭಟ್ಟರು ತಮ್ಮ ವ್ಯಾಪಾರದ ವಿಷಯವಾಗಿ ತುಂಬಾ ಜಂಭಕೊಚ್ಚಿದರು. "ತಲೆ ತಿರುಕ ಪದ್ಮನಾಭನಿಗೇನೂ ಅರಿಯದು. ಅಸೂಯೆ ಪಡಲರಿಯುವುದಲ್ಲದೆ ಕಾಸಿನ ಪ್ರಯೋಜನ ಅವನಿಂದಾಗದು. ಏನೋ ಎರಡು ಒಳ್ಳೆಯ ಮಾತು ಬುದ್ಧಿಗೆ ಹೇಳಿದುದಕ್ಕೆ ಹಾರಾಡಿ ಮನೆ ಬಿಟ್ಟು ಹೋಗಿದ್ದಾನೆ. ಹೋದರೆ ಹೋಗಲಿ. ದಮ್ಮಯ್ಯ ಹಾಕಿ ಕರತರುವವ ನಾನಲ್ಲ" ಎಂದು ಮನೆಯ ವಿಚಾರವನ್ನೂ ಸೂಕ್ಷ್ಮವಾಗಿ ಕೃಷ್ಣ ಭಟ್ಟರು ಮಾವನಿಗೆ ತಿಳಿಸಿದರು.

"ಎಷ್ಟೆಂದರೂ ಹಿರಿಯವನಾದ ನೀನು ಸ್ವಲ್ಪ ಜಾಗರೂಕತೆ ವಹಿಸಿ ಸೈರಿಸಿಕೊಳ್ಳಬೇಕಿತ್ತು. ಈಗ ಮನೆಬಿಟ್ಟು ಹೋದ ಪದ್ಮನಾಭ ಭಟ್ಟರು ಅಣ್ಣನೊಡಗೂಡಿ ಬಂದು ಹಿಶೆ ಕೇಳಿದರೆ ನೀನು ಕೊಡಲೇ ಬೇಕಲ್ಲ. ತುಂಡಾಗಿ ನೀವು ಬೇರೆ ಬೇರೆ ಆದರೆ ನಿನ್ನ ಘನಸ್ಥಿತಿಗೆ ಇಳಿದು ಹೋಗುವುದು. ಆದುದರಿಂದ ಇನ್ನಾದರೂ ಜಾಗ್ರತೆ ವಹಿಸಬೇಕು. ಅಲ್ಲದೆ ನೀನೀಗ ವ್ಯಾಪಾರವೆಂದು ಮತ್ತೊಂದು ಕೆಲಸಕ್ಕೂ ಕೈ ಹಾಕಿರು

ವೆಯಷ್ಟೆ. ಏಕಾಕಿಯಾದ ನೀನು ಮನೆಯ ವಿಚಾರ ನೋಡುವಿಯೋ? ವ್ಯಾಪಾರ ಮಾಡುವಿಯೋ? ಏನೆಲ್ಲ ಮಾಡುವೆ? ಮುಖ್ಯ ಹೇಳುವು ದಿದ್ದರೆ ವ್ಯಾಪಾರ ನಮ್ಮಿಂದ ಪೂರೈಸುವ ಕೆಲಸವಲ್ಲ. ಅದನ್ನು ಬಿಟ್ಟು ಬಿಡು. ಲಾಭಲಾಭ ಎಂದು ನೀನು ಹೇಳುತ್ತಿರುವೆ. ವ್ಯಾಪಾರದಲ್ಲಿ ಲಾಭಸಿಕ್ಕಿ ದೊಡ್ಡ ಸಾಹುಕಾರನಾಗುವುದೂ ಬೇಗ. ಸಾಹುಕಾರ ನಾದವ ದಿವಾಳಿ ಖೋರನಾಗುವುದೂ ಬೇಗ. ಚನ್ನಾಗಿ ಯೋಚಿಸಿ ನೋಡು. ಅತ್ಯಾಸೆ ಪಟ್ಟು ಇದ್ದುದನ್ನೂ ಕಳಕೊಳ್ಳಬಾರದು. ಮನೆಯ ವಿಚಾರಗಳೇ ಧಾರಾಳ ಪೂರೈಸಪಟ್ಟಿವೆ ನಿನಗೆ" ಎಂದು ಶಂಭು ಭಟ್ಟರನ್ನುವಾಗ ಕೃಷ್ಣ ಭಟ್ಟರಿಗೆ ಕಹಿಗುಳಿಗೆಗಳನ್ನು ನುಂಗಿದ ಹಾಗಾಯಿತು.

"ಮಾವಾ! ಯಾರೋ ನಿಮ್ಮ ಕಿವಿಯೂದಿಬಿಟ್ಟಿರಬೇಕು. ಇಲ್ಲ ವಾದರೆ ನೀವಿಂತೆನುವವರಲ್ಲ. ನನ್ನ ಮೇಲ್ಮೆಯನ್ನು ನೋಡಿ ಸಹಿಸಲಾಗ ದವರು ಹೇಳುವಂತೆ ನೀವೂ ಹೇಳುತ್ತಿರುವಿರಿ. ವ್ಯಾಪಾರದಲ್ಲಿ ಇದ್ದು ದನ್ನೂ ಕಳಕೊಳ್ಳುವ ಸಾಮರ್ಥ್ಯಹೀನನು ನಿಮ್ಮಳಿಯನಲ್ಲ. ತನ್ನ ಸ್ವಂತ ವಿವೇಕ ಸಾಮರ್ಥ್ಯಗಳಿಂದ ಮೇಲ್ಮೆಯನ್ನೈದುತಿರುವ ನನಗೆ ಪರರಂತೆ ನೀವೂ ಕಿರುಕುಳ ಕೊಡಬಾರದೆಂದು ನನ್ನ ಸವಿನಯ ಕೋರಿಕೆ. ಈಗ ನನಗೆ ವಿಪರೀತ ಕೆಲಸವಿದೆ. ನೀವಿಲ್ಲಿ ಉಳಕೊಳ್ಳಿರಿ. ನಾಳೆ ಹೋಗಬಹುದು. ಬೇಗನೆ ಬರುವೆ. ಮತ್ತೆ ಮಾತನಾಡುವ" ಎಂದೆ ನ್ನುತ್ತಾ ಕೃಷ್ಣ ಭಟ್ಟರು ಮಾವನ ಮಾತು ರುಚಿಸದೆ ಮಾತುಕತೆಗೆ ವಿರಾಮ ಕೊಡಬಯಸಿದರು.

"ಇಲ್ಲ. ನಾಳೆಯ ವರೆಗೆ ನಿಲ್ಲಲು ನನಗೂ ಅವಕಾಶವಿಲ್ಲ. ಮನೆಕಡೆಗೆ ಸಾಗಲೇಬೇಕು. ಸೀಮಂತವೆಂತೂ ಇಲ್ಲವೆಂದಾಯಿತಲ್ಲ. ಹೆರಿಗೆಗೆ ಲಲಿತೆಯನ್ನು ತವರು ಮನೆಗೆ ಕಳುಹಿಕೊಡಬೇಕು. ಯಾವಾಗ? ಹೇಗೆ? ನೀನೇ ಹೇಳಿಬಿಡು" ಎಂದು ಶಂಭು ಭಟ್ಟರೆಂದರು.

"ಯಾವಾಗಲಾದರೂ ಚಿಂತಿಲ್ಲ. ನೀವು ಬಂದಾಗ ಕಳುಹುವೆ. ನನ್ನಿಂದಡ್ಡಿಯಿಲ್ಲ" ಎಂದರು ಕೃಷ್ಣ ಭಟ್ಟರು.

ಅಂತಾದರೆ ಒಂದು ವಾರದೊಳಗೆ ಶುಭ ಮುಹೂರ್ತ ನೋಡಿ ನಿನ್ನತ್ತೆಯೊಂದಿಗೆ ಬಂದುಬಿಡುವೆ."

ಆಗಲಿ. ಹೋಗಲೇ ಬೇಕು ಎಂದಾದರೆ ತುಸು ಬಾಯಾರಿಕೆಗೆ ಕಾಫಿ ಕುಡಿದು ಹೋಗಬಹುದು. "ಏ ಲಲಿತೇ ಲಲಿತೇ? ಬೇಗನೆ ಕಾಫಿ ತಯಾರಿಸು" ಎಂದರು ಕೃಷ್ಣ ಭಟ್ಟರು. ಲಲಿತೆ ಬೇಗಬೇಗನೆ ಕಾಫಿ ತಯಾರಿಸಿದಳು. ಅಳಿಯ ಮಾವ ತಮ್ಮೊಳಗೆ ವಿರಸವಾದರೂ ಕಾಫಿ ಸೇವಿಸಿ ತಂತಮ್ಮ ದಾರಿ ಹಿಡಿದರು.

ತಂದೆ ಶಂಭು ಭಟ್ಟರಂದ ನುಡಿ ಲಲಿತೆಯ ಮನಕ್ಕೆ ಚನ್ನಾಗಿ ನಾಟಿತ್ತು. ಹಿಂದೊಮ್ಮೆ ಬಸ್ಸ್ ಡ್ರೈವರರಾಗಿರುವಾಗ ತನ್ನ ಪತಿ ದೇವನೆಸಗಿದ ಹೇಯ ಕೃತ್ಯವೂ ಬಂದೊದಗಿದ ದುರವಸ್ಥೆಯೂ ಲಲಿತೆಯ ಮನಃ ಪಟಲದಲ್ಲೊಡಮೂಡಿದವು. ಕೃಷ್ಣ ಭಟ್ಟರ ಹೃದಯದಲ್ಲಿ ತನಗಿರುವ ಸ್ಥಾನ ಬೇರೆಯವರಿಂದ ಅಪಹರಿಸಲ್ಪಟ್ಟಿದೆಯೆಂದರಿತಾಗ ಹೃದಯ ಬಿರಿಯಿತು, ಕಣ್ಣೀರು ಕಾಲುವೆಯಾಗಿ ಹರಿಯಿತು. "ನಾನು ಸಹಧರ್ಮಚಾರಿಣಿಯಾದುದರಿಂದ ಅಧರ್ಮಕ್ಕೆ ಕಾಲಿಡುತ್ತಿರುವ ಪತಿಯನ್ನೆಚ್ಚರಿಸುವುದು ಕರ್ತವ್ಯ. ಆದರೆ ನನ್ನ ಮಾತನ್ನವರು ಕಿವಿಗೆ ಹಾಕಿಕೊಳ್ಳುವರೇ? ಏನೋ? ಈಗೀಗ ಅವರಿಗೆ ನನ್ನನ್ನು ಕಂಡಾಗಲೇ ಸಿಟ್ಟುಬರುತ್ತಿದೆ. ಹೇಗೆ ತಿಳುಹಲಿ. ಯಾವ ಬಗೆಯುಲ್ಲರುಹಲಿ" ಎಂದು ಚಿಂತಿಸುತ್ತಾ ತಕ್ಕ ಸಮಯವನ್ನಿದಿರು ನೋಡ ತೊಡಗಿದಳು ಲಲಿತೆ.

ಕೃಷ್ಣ ಭಟ್ಟರೊಂದು ದಿನ ನಡುರಾತ್ರೆ ಕಳೆದು ಮನೆಗೆ ಬಂದರು. ಕಣ್ಣು ಕೆಂಪಾಗಿತ್ತು. ಕೈಕಾಲುಗಳವರಂದಂತೆ ಕೇಳುತ್ತಿರಲಿಲ್ಲ. ಅಂತಿರುವ ಕೃಷ್ಣ ಭಟ್ಟರು ಲಲಿತೆಯ ಉಪಚಾರಗಳನ್ನು ಚಾಚೂ ಉಸಿರೆತ್ತದೆ ಪ್ರಸನ್ನರಾಗಿ ಸ್ವೀಕರಿಸಿದರು. ಲಲಿತೆ ವೀಳ್ಯದೆಲೆ ಹರಿವಾಣ ಪತಿಯೆದುರಿರಿಸಿದಳು. ಮೆಲ್ಲಗೆ ಮಾತಿಗೆ ಸುರು ಹಚ್ಚಿದಳು.

"ನೀವು ಈಗೀಗ ಮನೆಗೆ ಬರುವುದೇ ಅಪರೂಪವಾಗಿದೆ. ಯಾವಾಗಲಾದರೂ ಒಮ್ಮೊಮ್ಮೆ ಅಸಮಯದಲ್ಲಿ ಬಂದು ಬಿಡುತ್ತೀರಿ. ಬಂದಾಗ ವಿಪರೀತ ಬಳಲಿದವರಂತೆ ತೋರುವಿರಿ. ಈರೀತಿ ದೇಹವನ್ನು ದಣಿಸಿದರೆ

ಏನಾದರು ಕಾಯಿಲೆ ಹಿಡಿದೀತು. ಕೆಲಸಗಳನ್ನೆಲ್ಲಾ ಆದಷ್ಟು ಬೇಗನೆ ಪೂರೈಸಿ ಸಾಯಂಕಾಲವಾಗುವುದರೊಳಗೆ ಬಂದು ಬಿಡಬಾರದೇ? ವಿಶ್ರಾಂತಿ ತಕ್ಕೊಳ್ಳಬಾರದೇ?" ಎಂದು ಮೆಲ್ಲಗೆ ಮುಗುಳು ನಕ್ಕು ಪ್ರೇಮ ಪೂರ್ವಕ ನುಡಿದಳು ಲಲಿತೆ.

"ಕೆಲಸಗಳು ಮಾಡಿದಷ್ಟೂ ಮುಗಿಯದುಳಿಯುತ್ತವೆ. ಅಂತಿರಲು ಬೇಗನೆ ಬಂದು ಬಿಡುವುದೆಂದರೆ ಅದು ಹೇಗೆ ತಾನೆ ಸಾಧ್ಯ?" ಅಂದರು ಕೃಷ್ಣ ಭಟ್ಟರು.

"ಕತ್ತಲಾಗಿ ರಾತ್ರಿಯಾದರೂ ವ್ಯಾಪಾರಕ್ಕೆ ಜನ ಬರುತ್ತಾರೆಯೇ? ಆಸಮಯದ ವ್ಯಾಪಾರ ಪ್ರತ್ಯೇಕ ವಿರಬಹುದು. ಆದುದರಿಂದಲೇ ಮನೆಗೆ ಬರಲೂ ಮನಸ್ಸಾಗುವುದಿಲ್ಲ" ಎಂದು ಚುಚ್ಚಿ ನುಡಿದಳು ಲಲಿತೆ.

"ಹುಚ್ಚೀ! ಏನಾದರೂ ವಿಕಲ್ಪವೆಣಿಸದಿರು. ನಿಜವಾಗಿಯೂ ಹಲವಾರು ಜನರನ್ನು ಬೀಳ್ಕೊಟ್ಟು ಬರುವಾಗ ಹೊತ್ತು ಮೀರಿ ಹೋಗುತ್ತದೆ. ಬಂದ ಜನರನ್ನು ನಿರ್ಲಕ್ಷಿಸುವುದು ವ್ಯಾಪಾರಸ್ಥರಿಗೆ ಹಿತವಲ್ಲವಷ್ಟೇ? ನಾನಾದರೂ ಮತ್ತೇನು ಮಾಡಲಿ?" ಅಂದರು ಕೃಷ್ಣ ಭಟ್ಟರು.

"ನಿಮ್ಮ ಸುದ್ದಿಯೆಲ್ಲಾ ನನಗೆ ಗೊತ್ತಿದೆ. ಹಿಂದೊಮ್ಮೆ ಆದುದು ನೆನಪಿದೆಯಲ್ಲವೇ? ಸಹ ಧರ್ಮಚಾರಿಣಿಯಾದುದರಿಂದ ಹೇಳುತ್ತೇನೆ. ಧರ್ಮಾರ್ಥಕಾಮಗಳಲ್ಲಿ ಸಹಚರಿಸುವೆನೆಂದು ಭಾಷೆಕೊಟ್ಟು ಕೈ ಹಿಡಿದು ಈರೀತಿ ವಂಚಿಸುವುದು ಸರಿಯಲ್ಲ" ಎಂದು ಲಲಿತೆ ವಿನಯ ಪೂರ್ವಕ ಅಂಗಲಾಚಿ ಸೆರಗೊಡ್ಡಿ ನುಡಿವಾಗ ಕೃಷ್ಣ ಭಟ್ಟರಿಗೆ ಸಿಟ್ಟು ನೆತ್ತಿಗೇರಿತು. ಮಾದಕ ಪದಾರ್ಥ ಸೇವಿಸಿದುದರಿಂದ ಸ್ಥಿರತೆ ತಪ್ಪಿತು.

ಕೊಟ್ಟ ಅನ್ನತಿಂದು ಬಿದ್ದುಕೊಂಡಿರಬೇಕಾದ ಇವಳೂ ಇಂತೆನ್ನುವುದೇ ಎಂದು ಕೆಂಡ ಕಾರಿದರು. "ಹೆಂಗಸರು ಗಂಡಸರ ವಿಚಾರ ವಿಮರ್ಶಿಸಬಾರದು. ಪತಿಯೇ ಪತ್ನಿಗೆ ಪರದೈವ. ಹೆಂಗಸಾದವಳು

ಗಂಡನಾಣತಿಗೆ ತಲೆಯೊಡ್ಡ ಬೇಕಲ್ಲದೆ ಕಿವಿ ಹಿಂಡುವ ವ್ಯಾಪಾರಕ್ಕೆ ಕೈಹಾಕಬಾರದು ನಡೆಯತ್ತ" ಎಂದು ಕೃಷ್ಣ ಭಟ್ಟರು ಬಿರುಸಾಗಿ ನುಡಿದರು.

"ಸಾರಿ ಹೇಳುತ್ತೇನೆ. ನಡು ನೀರಿನಲ್ಲಿ ನನ್ನ ಕೈಬಿಡಬೇಡಿ. ಒಲಿದ ನಾನಿರಲು ಚೆಲುವೆಯರನ್ನೊಲಿಸಹೋಗಿ ಅನರ್ಥ ಕಟ್ಟಿಕೊಳ್ಳ ದಿರಿ." ಎಂದು ಲಲಿತೆಯೂ ಹೆದರದೆ ಸ್ಪಷ್ಟ ನುಡಿದಳು.

"ಅಬ್ಬಾ ಗಂಡು ಬೀರಿಯೇ? ನಿನಗಿಷ್ಟೊಂದು ಅಧಿಕಾರವಿತ್ತವರು ಯಾರು? ಕೈಹಿಡಿದಾಕೆ ನೀನೂ ಈ ರೀತಿ ಗದರಿಸಿದರೆ ನನ್ನ ಗಂಡ ಸುತನವೆಲ್ಲುಳಿಯಿತು? ಛಿ! ಮಾರಿ, ಹೋಗು, ಸಾಯಿ." ಎನ್ನುತ್ತಾ ತಲೆ ಮುಡಿ ಹಿಡಿದು ಬಗ್ಗಿಸಿ ಎರಡು ಗುದ್ದೇರಿಸಿ ನೂಕಿ ಹೊಟ್ಟೆಗೆ ಬಲವಾಗಿ ಒದೆದೇ ಬಿಟ್ಟರು. ಒದೆದ ರಭಸಕ್ಕೆ ಲಲಿತೆ ಡಬ್ಬನೆ ನಾಲ್ಕು ಮಾರು ದೂರ ಉರುಳಿ ಬಿದ್ದುಬಿಟ್ಟಳು. ಲಲಿತೆಗೆ ಕಣ್ಣಿಗೆ ಕತ್ತಲು ಕವಿದಂತಾಯಿತು. ಸ್ಥಿರತಪ್ಪಿದ ಕೃಷ್ಣ ಭಟ್ಟರು ಲಲಿತೆ ಬಿದ್ದಲ್ಲಿಗೂ ಮತ್ತೊಂದು ಗುದ್ದು ಹಾಕಿದರು. ಶಪಿಸುತ್ತಾ ಮನಬಂದತ್ತ ರಾತ್ರಿ ಯಲ್ಲಿ ನಡೆದು ಬಿಟ್ಟರು. ಕ್ಷಣಕಾಲ ಕಳೆದಾಗ ಲಲಿತೆಗೆ ಪ್ರಜ್ಞೆ ಬಂತು ಹೊಟ್ಟೆಗೊದೆದುದರಿಂದಾಗಿ ಗರ್ಭಿಣಿಯಾದಾಕೆಗೆ ವಿಪರೀತ ಸಂಕಟವಾಗುತ್ತಿತ್ತು. ಪತಿ ದೇವಕಾಣೆಯಾಗಿದ್ದರು. ನೋವಿನಿಂದ ಹೊರಳಾಡ ತೊಡಗಿದಳು. ತನ್ನನ್ನು ತಾನೇ ಉಪಚರಿಸಿಕೊಂಡಳು ಲಲಿತೆ.

ಶುಭಮುಹೂರ್ತ ನಿಶ್ಚಯಿಸಿ ಕರಕೊಂಡು ಹೋಗಲು ಶಂಭು ಭಟ್ಟರು ಬಂದಾಗ ಲಲಿತೆ ಬೇನೆಯಿಂದ ಬಸವಳಿದಿದ್ದಳು. ಲಲಿತೆಯ ಹೆತ್ತ ತಂದೆತಾಯಿಗಳು ಕಣ್ಣೀರಿಳಿಸಿ ವಿಧಿಯನ್ನು ದೂರಿದರು. ಹೆಣ್ಣು ಕೊಟ್ಟು ಕೆಟ್ಟೆವೆಂದು ಮರುಗಿದರು. ಹೆಣ್ಣುಕೊಟ್ಟವರು ತಗ್ಗಿ ನಡೆಯದೆ ವಿಧಿಯಿಲ್ಲವೆಂದುಕೊಂಡರು. ಎಲ್ಲವನ್ನೂ ಸೈರಿಸಿಕೊಂಡರು. ಲಲಿತೆ ಯನ್ನು ಕರಕೊಂಡು ಹೋಗಿ ಉಪಚರಿಸದಿದ್ದಲ್ಲಿ ಮಗಳು ಕೈಬಿಟ್ಟು ಹೋಗಲೂ ಸಾಕು ಎಂಬ ಭಯ ಕರುಳಿಗಡರಿತು. ಬಂದವರು

ಕೃಷ್ಣಭಟ್ಟರೊಪ್ಪಿಗೆ ಪಡೆದು ಲಲಿತೆಯನ್ನು ತವರೂರಿಗೆ ಸಿಂಗಡ ಕರೆದು ಕೊಂಡು ಹೋದರು.

ಕೃಷ್ಣಭಟ್ಟರೀಗ ಏಕಾಕಿ. "ಆಪ್ತೇಷ್ಟರರೆಲ್ಲಾ ತನಗೆದುರಾಗಿ ಕತ್ತಿಕಟ್ಟಿ ನಿಂತಿರುವರು. ಸರ್ವ ನಾಶಮಾಡಲು ಯತ್ನಿಸುತ್ತಿರುವರು" ಎಂದು ಅವರ ದುರ್ಬುದ್ಧಿ ಪದೇಪದೇ ನುಡಿಯುತ್ತಿತ್ತು. ಮನೆ ಬಿಟ್ಟ ಪದ್ಮನಾಭ ಭಟ್ಟರ ಖಿತಾಫತ್ತು, ಏನೆಲ್ಲಾ ನಡೆಯಲಿದೆಯೋ? ನೋಡ ಬೇಕಷ್ಟೆ. ಅಣ್ಣ ಅನಂತ ಭಟ್ಟರನ್ನು ಕೂಡಿಕೊಂಡು ಬಂದಾರು. ಸಮ ಪಾಲು ಸಿಗಬೇಕೆಂದು ಅನ್ನದಿರರು. ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲೂ ಬಹುದು. ಮನೆಯೊಳಗವರು ನೇರಿ ಕುಳಿತರೆ ಹೊರದೂಡುವ ಕೆಲಸ ಸಾಧ್ಯವಾಗುವಂತಿಲ್ಲ. ಆದುಕಾರಣ ಮನೆ ಯೆಡೆಗೆ ಕಾಲಿಡಲು ಸಾಧ್ಯವಾಗದಂತೆ ತಕ್ಕ ಏರ್ಪಾಡುಗಳನ್ನು ಶೀಘ್ರ ವಾಗಿ ಕೈಕೊಳ್ಳಬೇಕು. ಏಕಾಂಗಿಯಾದ ತಾನು ಎಲ್ಲಾ ಕೆಲಸಗಳನ್ನೂ ನಿರ್ವಹಿಸಲಶಕ್ತ. ಎದುರು ಬರುವವರು ಸಾಮಾನ್ಯರಾದರೆ ಅವರು ಲಕ್ಷ್ಯಕ್ಕೆ ತರಲಾರರು. ಆದ್ದರಿಂದ ಗೆಳೆಯರಾದ ಮಮ್ಮುಂಞಿ ಬ್ಯಾರಿ ಗಳ ಸಹಾಯ ಪಡೆಯಬೇಕು. ಆಸ್ತಿ ಸರ್ವಾದಿಯನ್ನು ಮಮ್ಮುಂಞಿ ಬ್ಯಾರಿಗಳ ಹೆಸರಲ್ಲಿ "ಬಿನಾಮಿ" ರಿಕಾರ್ಡು ಮಾಡಿ ಇರಿಸುವೆನು. ಎಲ್ಲ ವನ್ನೂ ಅವರಾಧೀನಕ್ಕೊಳಪಡಿಸುವೆನು. ತಮ್ಮಂದಿರು ಹೊಲದಲ್ಲಿ ಕೈಹಾಕದಂತೆ ಬೆದರಿಸುವ ಕೆಲಸ ಅವರಿಂದಾಗಬೇಕು. ಬೇಕುಬೇ ಕಾದ ಸಹಕಾರವನ್ನವರಿಗೂ ಕೊಡಬೇಕು. ನಾನಂದ ನುಡಿ ತಪ್ಪುವವ ರವರಲ್ಲ" ಎಂದು ಕೃಷ್ಣ ಭಟ್ಟರಿಗೊಂದು ಕುತಂತ್ರ ಹೊಳೆಯಿತು. ಜಮೀನನ್ನೆಲ್ಲಾ ಮಮ್ಮುಂಞಿ ಬ್ಯಾರಿಗಳಿಗೆ ಪಾಯಿದೆ ಗೇಣಿಗೆ ಕೊಟ್ಟಂತೆ ರಿಕಾರ್ಡು ಮಾಡಿಕೊಂಡರು. ತಮ್ಮಂದಿರು ಇನ್ನು ಬಂದು ಹಿಸೆ ಕೇಳಿದರೆ ತಲೆ ಮೇಲೆ ಕೈಯಿರಿಸಿ ಹಿಂತಿರುಗಬೇಕು. ಗೆದ್ದೆನೆಂದು ಅವರು ಭಾವಿಸಿಕೊಂಡರು.

ಗಣೇಶ ಕಮ್ತಿಗಳು ಕೃಷ್ಣ ಭಟ್ಟರ ಚಲನವಲನಗಳನ್ನು ಕಣ್ಣಿಗೆಣ್ಣೆ ಹಾಕಿ ನೋಡುತ್ತಿದ್ದರು. ಕೃಷ್ಣ ಭಟ್ಟರನ್ನು ಬುಡಮೇಲು ಮಾಡಲು

ಇದು ತಕ್ಕ ಸಮಯವೆಂದು ಬಗೆದರು. ಬಿಡುವಿಲ್ಲವಾದರೂ ಬಿಡು ಮಾಡಿಕೊಂಡು ಸೀದಾ ಗಂಗಮ್ಮ ನಿದ್ದಲ್ಲಿಗೆ ಗಜಾನನ ಭಟ್ಟರ ಮನೆಗೆ ತೆರಳಿದರು. ಗಂಗಮ್ಮನೂ ಗಜಾನನ ಭಟ್ಟರೂ ಕರ್ಣಾ ಕರ್ಣಿಕೆ ಯಿಂದ ಹಲಸಿನಡ್ಕದ ಸುದ್ದಿ ಕೇಳಿದ್ದರು. "ಏನು ಮಾಡುವುದು? ವಿನಾಶ ಕಾಲ ಬಂತಲ್ಲ" ಎಂದು ಮರುಗುತ್ತಿದ್ದರು. ಬಂದ ಕವಿತ್ತಿಗಳು ಕೃಷ್ಣ ಭಟ್ಟರ ಕಾರ್ಯಭಾರವನ್ನು ಸವಿಸ್ತಾರವಾಗಿ ವರ್ಣಿಸಿದರು. ಪದ್ಮನಾಭ ಭಟ್ಟರನ್ನು ಹೊರದಬ್ಬಿದುದು, ಲಲಿತೆಯನ್ನು ಹಿಂಸಿಸಿದುದು, ಶಂಭು ಭಟ್ಟರ ಮನನೋಯಿಸಿದುದು ಮೊದಲಾದುವನ್ನು ಮನಕರಗುವಂತೆ ಬಿಡಿಸಿ ಹೇಳಿದರು. "ಸದ್ಯಃ ಉನ್ಮತ್ತರಾಗಿ ಆಸ್ತಿಯನ್ನೆಲ್ಲಾ ಪರಾಭಾರೆ ಮಾಡಿರುವರು. ಇನ್ನುಳಿಗಾಲವಿಲ್ಲ. ನೀವು ಜಾಗ್ರತೆ ವಹಿಸದಿದ್ದರೆ ನಿಮ್ಮ ಮಾವಗಳಿಸಿಟ್ಟ ಆಸ್ತಿ ನರಿ ನಾಯಿಗಳ ಪಾಲಾಗುವುದು. ಸಜ್ಜನ ರಾದ ಅನಂತ ಭಟ್ಟ, ಪದ್ಮನಾಭ ಭಟ್ಟ, ಗಂಗಮ್ಮನವರಿಗೆ ಏನೂ ಇಲ್ಲ ದಾಗುವುದು. ಊರಲ್ಲಿ ಒಂದು ಬಗೆಯಲ್ಲಿ ಮರ್ಯಾದಸ್ಥರೆಲ್ಲಾ ಅವರ ವಿರೋಧಿಗಳಾಗಿರುವರು. ತಕ್ಕ ಕಾರ್ಯಕ್ರಮ ಕೈಗೊಳ್ಳಿರಿ. ವಾಸುದೇವ ಭಟ್ಟರು ನಮ್ಮ ಅತ್ಯಂತ ಆಪ್ತರು. ಅವರ ದುಡಿತ ಅವರ ಮಕ್ಕಳಿಗಿಲ್ಲವಾಗುವುದನ್ನು ನೋಡಿ ಸೈರಿಸಲಾಗದೆ ನಿಮ್ಮೊಡನೆ ಇಷ್ಟು ಹೇಳಿದೆ" ಎಂದು ಗಣೇಶ ಕವಿತ್ತಿಗಳು ಗಜಾನನ ಭಟ್ಟರೊಡನೆಂದರು. ಗಜಾನನ ಭಟ್ಟರು ನಿರ್ವಿಣ್ಣರಾಗಿ ತುಸು ಹೊತ್ತು ಯೋಚನೆಗೀಡಾದರು. "ಆಗಲಿ, ಕಾಗದ ಬರೆದು ಭಾವಂದಿರನ್ನು ಬರಿಸುವೆನು. ನಿಮ್ಮೆಲ್ಲರ ಸಹಕಾರ ದೊರಕಿದರೆ ಬಂಧುಗಳ ಕುಟುಂಬದ ನೊತ್ತನ್ನು ರಕ್ಷಿಸಲು ಸೊಂಟಕಟ್ಟುವೆನು" ಎಂದರು. ತನ್ನಿಚ್ಛೆ ಹೂಬಿಡುತ್ತಿರುವುದನ್ನು ನೋಡಿ ಗಣೇಶ ಕವಿತ್ತಿಗಳ ಮನ ತಣಿಯಿತು. ಗಜಾನನ ಭಟ್ಟರಿಂದ ಆದರ ಪೂರ್ವಕವಾಗಿ ಬೀಳ್ಕೊಂಡು ತಮ್ಮ ವಸತಿಗೆ ಹಿಂತಿರುಗಿದರು.

ಪದ್ಮನಾಭ ಭಟ್ಟರು ಮನೆಯಿಂದ ಹೊರಟವರು ಸೀದಾ ಅಣ್ಣ ಅನಂತ ಭಟ್ಟರಲ್ಲಿಗೆ ಸಾಗಿದ್ದರು. ಅಣ್ಣನೊಂದಿಗೆ ಸೇರಿಕೊಂಡಿದ್ದರು. ಅನಂತ ಭಟ್ಟರಿಗೆ ದೊಡ್ಡಣ್ಣನ ಅತಿರೇಕ ವರ್ತನೆ ತಿಳಿದಾಗ ಮನದಲ್ಲಿ ರೋಷಶೋಕಗಳೊಮ್ಮೆಲೆಯೇ ಉಕ್ಕಿಬಂದವು. ತಮ್ಮನನ್ನು ಸಮ

ಜಾಯಿಸಿದರು. ನಮ್ಮ ಜೀವನ ಹಿರಿಯರು ದುಡಿದಿಟ್ಟುದರಿಂದ ಸಾಗ ಬೇಕೆಂದಿಲ್ಲ. ದೊಡ್ಡಣ್ಣನೆಡೆಗೆ ಹೋಗಿ ಆಸ್ತಿಯನ್ನು ತುಂಡರಿಸ ಲೊತ್ತಾಯಿಸಿ ಸಾಮಾನ್ಯವಾಗಿ ಲೋಕದಲ್ಲಿ ನಡೆಯುವಂತೆ ಅಲ್ಲಸಲ್ಲದ ಅಶಾಂತಿಯನ್ನು ತಂದೊಡ್ಡುವುದು ಬೇಡ. ನಾವು ದುಡಿದು ಉಣ್ಣುವ ಎಂದು ಅಣ್ಣ ತಮ್ಮಂದಿರು ನಿರ್ಧರಿಸಿ ಅನ್ಯೋನ್ಯತೆಯಿಂದ ದುಡಿಯಲು ಪ್ರಕ್ರಮಿಸಿದ್ದರು. ಸುಖ ಜೀವನ ಸಾಗಿಸಲು ತೊಡಗಿದ್ದರು. ಆದು ದರಿಂದಲೇ ಅನಂತ ಭಟ್ಟರು ತಮ್ಮ ತನ್ನಲ್ಲಿಗೆ ಬಂದ ಸಂಗತಿಯನ್ನು ಬಂಧುಗಳಿಗಾರಿಗೂ ತಿಳಿಸದೆ ಬಚ್ಚಿಟ್ಟಿದ್ದರು.

ಹೀಗಿರಲು ಗಜಾನನ ಭಟ್ಟರ ಕಾಗದ (ಪತ್ರ)ವೊಂದು ಅನಂತ ಭಟ್ಟರಿಗೆ ಬಂತು. ಎಲ್ಲಾ ಸಂಗತಿಗಳ ಸೂಕ್ಷ್ಮ ವಿವರವದರಲ್ಲಿತ್ತು. "ಹೀಗೆ ಸುಮ್ಮಗಿರುವುದು ಸರಿಯಲ್ಲ. ಪಿತ್ರಾರ್ಜಿತ ಸೊತ್ತು ಹಾಳಾ ಗುವುದನ್ನು ಕಂಡೂ ಕಂಡೂ ಕೈಕಟ್ಟಿ ಕುಳಿತಿರಬಾರದು. ನೋಡುತ್ತಾ ಸುಮ್ಮಗಿದ್ದರೆ ಅದಕ್ಕಿಂತ ಮಿಗಿಲಾದ ತಪ್ಪು ಇನ್ನೊಂದಿಲ್ಲ. ತಾಯಿ ಗಂಗಮ್ಮ ಕೊರಗುತ್ತಿರುವರು. ಅವರದೂ ಇದೇ ಅಭಿಪ್ರಾಯ. ಮುಂದೆ ಮಾಡತಕ್ಕ ಕೆಲಸಗಳು ತುಂಬಾ ಇವೆ. ಬಹುಬೇಗನೆ ಹೊರಟು ಬನ್ನಿರಿ" ಎಂದು ಪತ್ರದಲ್ಲಿ ತಿಳಿಸಲಾಗಿತ್ತು. ಅಣ್ಣತಮ್ಮ ಇಬ್ಬರೂ ಪತ್ರವನ್ನೋದಿದರು. "ತಾಯಿಗಿಂತ ಹಿರಿಯ ಬಂಧುವಿಲ್ಲ. ಆಪ್ತೇಷ್ಟರರ ಮಾತು ಮೀರಬಾರದು" ಎಂದಿಬ್ಬರೂ ನಿರ್ಧರಿಸಿದರು. ತಮ್ಮ ಯಜಮಾನರಿಗೆ ಪತ್ರ ತೋರಿಸಿ ರಜೆಪಡೆದು ತಾಯಿ, ತಂಗಿ, ಭಾವಂದಿರಿರುವೆಡೆಗೆ ಧಾವಿಸಿ ಬಂದರು.

ಪದ್ಮನಾಭ ಭಟ್ಟರೊಡಗೂಡಿ ಬಂದ ಅನಂತ ಭಟ್ಟರನ್ನು ನೋಡಿ ಸಾವಿತ್ರಿ, ಗಂಗಮ್ಮ, ಗಜಾನನ ಭಟ್ಟರಿಗೆ ಹಿಡಿಸಲಾರದ ಆನಂದ ವಾಯಿತು. ತಾಯಿಯಾದ ಗಂಗಮ್ಮನ ಕರುಳು ಪುತ್ರ ವಾತ್ಸಲ್ಯದಿಂದ ಹಿಗ್ಗಿತು. ತಂಗಿ ಸಾವಿತ್ರಿ ಅಣ್ಣಂದಿರನ್ನು ನೋಡಿ ಸಹೋದರ ಪ್ರೇಮದಿಂದ ನಲಿದಾಡಿದಳು. ಎಲ್ಲರೂ ಆನಂದ ಸಂಭ್ರಮದಲ್ಲಿ ಒಂದೆರಡು ದಿನ ಗಳನ್ನು ಕಳೆದರು. ತಾಯಿ ಗಂಗಮ್ಮ ಚಿಕ್ಕ ಮಕ್ಕಳೊಡನೆ ದುರವಸ್ಥೆ

ಹೇಳಿ ಹೇಳಿ ಕಣ್ಣೀರು ಸುರಿಸಿದಳು. "ನನಗೆ ನೀವೇ ಗತಿ" ಎಂದು ಹಲುಬಿದಳು. "ಮುದುಕಿ ತಾಯಿಯನ್ನು ಮಕ್ಕಳಾದ ನಾವು ಕಾಪಾಡಲೇ ಬೇಕು. ಆಕೆಯ ಮನ ನೋಯಿಸಬಾರದು. ಅವಳಿನ್ನುವಂತೆ ನಾವು ಮುಂದಿನ ಕಾರ್ಯ ಕ್ರಮಗಳಿಗೆ ಸಿದ್ಧರೆಂದು" ಅನಂತ ಭಟ್ಟರು ಗಜಾನನ ಭಟ್ಟರಿಗರುಹಿದರು. ಗಜಾನನ ಭಟ್ಟರು ಭಾವಂದಿರೊಡನೆ ಚೆನ್ನೂರಿಗೆ ಪಯಣ ಬೆಳೆಸಿದರು. ಗಣೇಶ ಕಮ್ತಿಗಳ ಭೇಟಿಮಾಡಿದರು. ಚೆನ್ನೂರ ಕೀಲಿಯೆನಿಸಿದ ಮಂಜಪ್ಪ ಗೌಡರನ್ನೂ ಕಂಡು ಮಾತನಾಡಿ ಸಹಕಾರ ನೀಡಬೇಕೆಂದು ಕೇಳಿಕೊಂಡರು. ಮಂಜಪ್ಪ ಗೌಡರೂ ಗಣೇಶ ಕಮ್ತಿಗಳೂ ತಮ್ಮಿಂದಾಗುವ ಸಹಕಾರ ಸಂಪೂರ್ಣ ನೀಡುವೆ ವೆಂದು ಭರವಸೆಯಿತ್ತರು. "ಆಸ್ತಿಯನ್ನು ಸರಿಯಾಗಿ ವಿಭಾಗಿಸಿ ನಮ್ಮ ಹಿಶೆಯನ್ನು ನಮಗಿತ್ತು ಬಿಡಿ" ಎಂದೆನಲು ಅನಂತ ಭಟ್ಟರೂ ಪದ್ಮನಾಭ ಭಟ್ಟರೂ ಭಾವನೊಂದಿಗೆ ಅಣ್ಣ ಕೃಷ್ಣ ಭಟ್ಟರಲ್ಲಿಗೆ ಮಾತನಾಡಲು ತೆರಳಿದರು.

ಅಂಗಡಿಯಲ್ಲಿ ಕಾಲ ಮೇಲೆ ಕಾಲಿರಿಸಿ ಮಂಡಿಸಿದ ಕೃಷ್ಣ ಭಟ್ಟರು ತಮ್ಮೆಡೆಗಾಗಿ ಬರುತ್ತಿರುವ ಈ ಮೂವರನ್ನೂ ತುಸು ದೂರದಿಂದ ನೋಡಿದರು. ಕೂಡಲೇ "ಈ ತ್ರಿಮೂರ್ತಿಗಳಿನ್ನೇನು ಕಿರುಕುಳ ತಂದೊಡ್ಡಲಿರುವರೋ?" ಎಂದು ಅವರ ಮನಕದಡಿತು. "ಬಂದವರನ್ನು ಬಂದಂತೆ ಹಿಂದಿರುಗಿಸುವ ಶಕ್ತಿ ನನಗಿದೆ. ನನಗಾಗಿ ಪ್ರಾಣಸಹ ಕೊಡಲು ತಯಾರಾಗಿರುವ ಬಟ್ಯಪ್ಪ, ಐತಪ್ಪ, ಮಮ್ಮುಂಞ ಬ್ಯಾರಿಗಳೇ ಮೊದಲಾದ ಗೆಳೆಯರಿರುವಾಗ ಭಯವೇನು? ಬರಲಿ. ಏನನ್ನುವರೋ? ನೋಡುವ." ಎಂದು ಮನದಲ್ಲಂದುಕೊಂಡು ಮತ್ತಷ್ಟು ಗಂಭೀರರಾಗಿ ಅವರನ್ನಿದುರು ನೋಡ ತೊಡಗಿದರು. ಗಜಾನನ ಭಟ್ಟರೂ ತಮ್ಮಂದಿರೂ ಕೃಷ್ಣ ಭಟ್ಟರನ್ನು ಮಾತನಾಡಿಸಿದರು. ಮನಸ್ಸಿಲ್ಲವಾದರೂ ಉಪ ಚಾರಕ್ಕಾಗಿ ಕೃಷ್ಣ ಭಟ್ಟರು ಪ್ರತ್ಯುತ್ತರವಿತ್ತರು.

ಅನಂತ ಭಟ್ಟರೂ ಪದ್ಮನಾಭ ಭಟ್ಟರೂ ಬಂದ ಸಂಗತಿಗಳನ್ನೆಲ್ಲಾ ಕೂಲಂಕಷವಾಗಿ ಅಣ್ಣನಿಗೆ ಹೇಳಿದರು. "ಆಸ್ತಿಯಲ್ಲಿ ಸಮಭಾಗ

ಕೊಡಬೇಕು" ಎಂದು ನುಡಿದರು. ಕೃಷ್ಣ ಭಟ್ಟರ ಮುಖದಲ್ಲಿ ತಿರ ಸ್ಕಾರದ ಛಾಯೆ ಮೂಡಿತು. "ಎಲ್ಲಿಯ ಪಾಲು? ಯಾರು ಕೊಡು ವುದು? ಹೇಗಾಯಿತು?" ಎಂದು ಕೊಂಕು ನುಡಿದರು. ವಿರಸ ತಲೆ ದೋರಿತು. ಅಣ್ಣ ತಮ್ಮಂದಿರು ಸಿಟ್ಟಿಗೇಳುವ ಲಕ್ಷಣ ಒಡ ಮೂಡಿತು. ಆಗ ಗಜಾನನ ಭಟ್ಟರು ಎಲ್ಲರನ್ನೂ ಸಂತೈಸಿದರು. ಗಲಾಟೆ ಮೇರೆ ಮೀರದಂತೆ ಜಾಗ್ರತೆ ವಹಿಸಿದರು. "ನಿಮ್ಮೊಳಗೆ ನರಿ ಬೀಳುವುದಿಲ್ಲ ವೆಂದಾದಾಗ ಇದ್ದುದನ್ನು ಇದ್ದಂತೆ ಗಲಾಟೆಯಿಲ್ಲದೆ ಅನ್ಯೋನ್ಯತೆಯಿಂದ ತೀರಿಸಿಕೊಳ್ಳುವುದು ಒಳ್ಳೆಯದು. ಸಮುಹಕ್ಕು ಪಿತ್ರಾರ್ಜಿತದಲ್ಲಿ ಎಲ್ಲ ರಿಗೂ ಇದೆ. ನುಮ್ಮನುಮ್ಮಗೆ ಅಲ್ಲಸಲ್ಲದ ಹಗರಣ ಹಚ್ಚಿ ಇಬ್ಬರ ಜಗಳ ಮೂರನೆಯವನಿಗೆ ಆದಾಯ ಎಂದು ಮಾಡಿಕೊಡುವುದು ಸರಿಯಲ್ಲ. ಭಾವಂದಿರಾದ ನೀವು ಮೂವರು ವಿವೇಕಿಗಳಾಗಿ ಪಿತ್ರಾರ್ಜಿತವನ್ನು ಸರಿಯಾಗಿ ಭಾಗಿಸಿ ಅನುಭವಿಸಿಕೊಳ್ಳಿರಿ. ಬಂಧುಗಳಾದ ನಾವು ಮರುಗುವಂತ ಮಾಡಬೇಡಿರಿ" ಎಂದು ಗಜಾನನ ಭಟ್ಟರಂದಾಗ ಕೃಷ್ಣ ಭಟ್ಟರ ಮುಖ ದಪ್ಪವಾಯಿತು. ಸಿಟ್ಟು ಬಂದರೂ ನುಂಗಿ ಕೊಂಡರು. "ತಂದೆಯವರಾದ ವಾಸುದೇವ ಭಟ್ಟರಿರುವಾಗ ತುಂಡಾಗದೆ ಇದ್ದ ಆಸ್ತಿ ಇನ್ನೂ ಹಾಗೆಯೇ ಉಳಿಯಬೇಕು. ಈಗ ತುಂಡಾದರೆ ನನಗದು ಅವಮಾನ. ಆದುದರಿಂದ ನಾನು ಜೀವಂತನಾಗಿರುವ ತನಕ ಸೊತ್ತಿನಲ್ಲಿ ಪಾಲು ಕೊಡುವವನಲ್ಲ. ಇವರೆಲ್ಲಾ ತಂದೆಯುವ ರಿರುವಾಗ ಅವರನ್ನು ಮಂಕುಮಾಡಿ ಬಗಲೊಳಗಿರಿಸಿಕೊಂಡಿದ್ದರು. ಅವರೊಂದಿಗೆ ಮನಬಂದಂತೆ ಸೊತ್ತನ್ನು ಅನುಭವಿಸಿದರು. ಆಗ ನಾನು ನನ್ನನ್ನು ಬೇರ್ಪಡಿಸಿರಿ ಎಂದಾಗ ವಾಸುದೇವ ಭಟ್ಟರು "ನಿನ ಗಿದರಲ್ಲಿ ಒಂದು ಕಡ್ಡಿನಹ ನಾನಿರುವ ವರೆಗೆ ದೊರಕಲಾರದು. ಎಲ್ಲಾ ನನ್ನ ಸ್ವಾರ್ಜಿತ" ಎಂದಿದ್ದರು. ಈಗ ನನ್ನ ಯಜಮಾನಿಕೆ. ನಾನೂ ಅನ್ನುವುದು ತಂದೆಯವರಂದುದನ್ನೇ ಸರಿ. ನನ್ನಿಚ್ಛೆ. ನಿಮಗೆ ಪಾಲು ಕೊಡಲಾರೆ. ಎಲ್ಲಾ ನನ್ನದು. ಒಂದೆಳ್ಳಷ್ಟುಸಹ ಅಧಿಕಾರ ನಿಮಗಿ ದರಲ್ಲಿ ಇಲ್ಲ. ಒಂದು ಕಡ್ಡಿಸಹ ತಮ್ಮಂದಿರು ಮುಟ್ಟಬಾರದು. ಯಜಮಾನನ ನೆಲೆಯಲ್ಲಿ ಆಸ್ತಿಯನ್ನು ಮುಮ್ಮುಂಞಿ ಬ್ಯಾರಿಗಳಿಗೆ

ವಾಯಿದೆಗೆ ಕೊಟ್ಟಿರುವೆನು. ನೀವು ಜಮೀನಿಗೆ ಕಾಲಿರಿಸಿದರೆ ಬ್ಯಾರಿ ಗಳು ಜೀವತೆಗೆದು ಬಿಟ್ಟಾರು. ಜೀವದಾಸೆ ಇದ್ದರೆ ಮಾತನಾಡದೆ ಬಂದ ದಾರಿಗೆ ಸುಂಕವಿಲ್ಲೆಂದು ಹಿಂತಿರುಗಿರಿ. ಪಾಲು ವಸೂಲು ಮಾಡಿಯೇ ತೀರುವೆವೆಂಬ ಹಟವಿದ್ದರೆ ಕೋರ್ಟಿಗೆ ಹೋಗಿ ನೋಡಿ ಕೊಳ್ಳಿರಿ. ನಡೆಯಿರಿ, ನಿಮ್ಮ ಮುಖ ನೋಡಲಾರೆ." ಎಂದು ಕೃಷ ಭಟ್ಟರು ಮುಖ ತಿರುಗಿಸಿ ಕುಳಿತರು. ಬಂದ ಗಜಾನನ ಭಟ್ಟರಾಗಲಿ ಅನಂತ ಭಟ್ಟರಾಗಲಿ ಪದ್ಮನಾಭ ಭಟ್ಟರಾಗಲಿ ಏನೇನು ಹೇಳಿದರೂ ಅವರಿಗೆ ಕೇಳಿನದಾಯಿತು. ಬಂದು ಮೂವರೂ ನಿರಾಶರಾಗಿ ಹಿಂತಿರುಗಿ ದರು.

ಕೃಷ್ಣ ಭಟ್ಟರ ಆಸ್ತಿ ಈಗ ತನ್ನದಾಗಿದೆ. ಯಾರೊಬ್ಬರೂ ಇದಕ್ಕೆ ಕೈಯಿಕ್ಕದಂತೆ ನೋಡಿಕೊಳ್ಳುವವ ನಾನು. ಅತಿಕ್ರಮಿಸಿ ಅನಂತಭಟ್ಟರಾಗಲಿ ಪದ್ಮನಾಭ ಭಟ್ಟರಾಗಲಿ ತಮ್ಮದೆಂದು ಪ್ರವೇಶ ಮಾಡಿದರೆ "ಕೈಕಾಲು ಮುರಿದುಹಾಕುವೆ" ಎಂದು ಬ್ಯಾರಿಗಳು ಊರ ಲ್ಲೆಲ್ಲಾ ಅಬ್ಬರಿಸಿ ಡಂಗುರ ಸಾರಿದ್ದರು. ತನ್ನವರಾದ ಕೆಲ ಜನ ರನ್ನು ಜಮೀನಿನ ಕಾವಲಿಗೆ ದೊಣ್ಣೆ ಕತ್ತಿಸಮೇತ ಕಾವಲಿರಿಸಿದ್ದರು. ಕೃಷ್ಣಭಟ್ಟರಂಗಡಿಯಿಂದ ಮೂವರೂ ನಿರಾಶರಾಗಿ ಹಿಂತಿರುಗುವಾಗ ಹತ್ತಾರು ಪೋಲಿಗಳನ್ನು ಕೂಡಿಸಿ ಅವರೆದುರು ಮಿಲಿಟರಿ ಪೆರೇಡು ನಡೆಯಿಸಿದರು. ಇವರ ಮನದಲ್ಲಿ ಭಯ ಹುಟ್ಟುವಂತೆ ಮಾಡಿದರು. ಏನು ಮಾಡುವುದೆಂದು ಗಜಾನನ ಭಟ್ಟರೇ ಮೊದಲಾದವರರಿಯ ದಾದರು.

"ನಯದ ನುಡಿ ಕೃಷ್ಣ ಭಟ್ಟರಿಗೆ ಹಿಡಿಸದು. ಕೋರ್ಟಿಗೆ ಹತ್ತಿದರೆ ಅಸಲಾಗದು. ರಾಜಿಯಲ್ಲಿ ಊರಲ್ಲೇ ಹೇಗಾದರೂ ಮಾಡಿ ಪಂಚಾಯಿತಿಕೆ ಮಾಡಿ ತೀರ್ಮಾನಿಸಬೇಕೆ"ಂದು ಗಜಾನನ ಭಟ್ಟರು ತಮ್ಮಭಿಪ್ರಾಯವನ್ನು ಭಾವಂದಿರಿಗೆ ತಿಳಿಸಿದರು. ಭಾವಂದಿರೊಡ ಗೂಡಿ ಊರ ಪ್ರತಿಷ್ಠಿತರೆನಿಸಿದ ಮಂಜಪ್ಪ ಗೌಡರಲ್ಲಿಗೆ ಸಾಗಿದರು. ಮಂಜಪ್ಪ ಗೌಡರು ಸಹಕಾರವೀಯುವೆನೆಂದು ಮೊದಲೇ ಮಾತು

ಕೊಟ್ಟಿದ್ದರು. ಊರವರ ವಾದ ವಿವಾದಗಳನ್ನು ಪರಿಹರಿಸುವುದರಲ್ಲಿ ಅವರು ಬಲು ಗಟ್ಟಿಗರಾಗಿದ್ದರು. ಅನ್ಯಾಯಕ್ಕೆ ಮನಗೊಡದ ವಿಶ್ವಾಸಾರ್ಹನರೆಂದು ಹೆಸರು ಪಡೆದಿದ್ದರು. ಕವ್ತಿಗಳ ಗೆಳೆತನದಿಂದಾಗಿಯೂ ಅನಂತ ಭಟ್ಟರೇ ಮೊದಲಾದವರ ಕೇಳಿಕೆ ನ್ಯಾಯವಾದುದರಿಂದಲೂ ಪಂಚಾಯಿತಿಕೆ ಮಾಡಿ ವಿವಾದ ಪರಿಹರಿಸುವೆನೆಂದು ಮಂಜಪ್ಪ ಗೌಡರು ಅಭಯನೀಡಿದರು.

"ನಿಮ್ಮ ದೂರು ನಮ್ಮಲ್ಲಿಗೆ ಬಂದಿದೆ. ಪಂಚಾಯಿತಿಕೆ ಮಾಡಿ ವಿವಾದ ಪರಿಹರಿಸುವೆ. ಕಾದಾಡಿ ವೃಥಾ ಕಷ್ಟ ನಷ್ಟಗಳಿಗೆ ಗುರಿಯಾಗುವುದು ಬೇಡ. ಬನ್ನಿರಿ" ಎಂದು ಗೌಡರು ಕೃಷ್ಣ ಭಟ್ಟರಿಗೆ ಕರೆಯಿತ್ತರು. ಉನ್ಮತ್ತರಾದ ಕೃಷ್ಣ ಭಟ್ಟರು ಮಂಜಪ್ಪ ಗೌಡರ ಕರೆಯನ್ನಲ್ಲಗಳೆದರು. "ನಿಮ್ಮ ಪಂಚಾಯಿತಿಕೆ ನಮಗೆ ಬೇಡ" ಎಂದು ಪ್ರತಿ ನುಡಿದರು. ಊರ ಜನರೆಲ್ಲ ತನ್ನ ಮಾತನ್ನಿಷ್ಟರವರೆಗೆ ಯಾರೂ ಮೀರಿಲ್ಲ. ತಿರಸ್ಕರಿಸಲಿಲ್ಲ. ಈ ಕೃಷ್ಣ ಭಟ್ಟರು ಮೊನ್ನೆ ತಾನೆ ಹುಟ್ಟಿದವರು ನನ್ನ ಮಾತನ್ನಲ್ಲಗಳೆಯುವುದೇ? ಅಭಿಮಾನವೆಲ್ಲಳಿಯಿತು? ಎಂದು ಗೌಡರಿಗೂ ಸಿಟ್ಟುಬಂತು. "ಕಾಲಬುಡಕ್ಕೆ ಬಂದು ಪಂಚಾಯಿತಿಕೆ ಮಾಡಿ ಬಗೆಹರಿಸಿರಿ ಎಂದು ಕೈಜೋಡಿಸಿ ತಲೆಬಗ್ಗಿಸಿ ಕೃಷ್ಣ ಭಟ್ಟರಿಂದ ಹೇಳಿಸದಿರಲಾರೆ" ಎಂದು ಮೀಸೆ ತಿರುವಿದರು. ಕೋರ್ಟು ಹತ್ತಿದರೆ ವಿಪರೀತ ಕಷ್ಟನಷ್ಟ. ಯಾವಾಗ ಇತ್ಯರ್ಥವಾಗುವುದೆಂದು ಹೇಳಬರುವಂತಿಲ್ಲ. ಈಗ ತುಸು ಹಣ ವ್ಯರ್ಥವಾಗಿ ಕೈಬಿಟ್ಟರೂ ಚಿಂತಿಲ್ಲ. ಮಮ್ಮುಂಞಿ ಬ್ಯಾರಿಗಳನ್ನು ಬರಮಾಡುತ್ತೇನೆ. ಸಾಮ ದಾನ ಬೇಧ ದಂಡಗಳೆಂಬ ಉಪಾಯಗಳನ್ನುಪಯೋಗಿಸಿ ನಮಗನುಕೂಲರಾಗಿ ನಡೆಯುವಂತೆಸಗುವೆನು. ಗಜಾನನ ಭಟ್ಟರೊಂದಿಷ್ಟು ಹಣ ಕೊಟ್ಟು ಮಮ್ಮುಂಞಿ ಬ್ಯಾರಿಗಳ ಕೈಯಿಂದ ವಾಯಿದೆ ಗೇಣಿಚೀಟಿನ ಮೇಲ್ಚೀಟು ಪಡಕೊಳ್ಳಬೇಕು. ಆಗ ಆಸ್ತಿ ಸಂಪೂರ್ಣ ಗಜಾನನ ಭಟ್ಟರ ಕೈಯಲ್ಲಾಗುತ್ತದೆ. ಆಮೇಲೆ ಕೃಷ್ಣ ಭಟ್ಟರನ್ನು ಹೇಗೆ ಬೇಕೋ ಹಾಗೆ ಕುಣಿಸವವ ನಾನು" ಎಂದು

ಗೌಡರು ಮುಂದೆ ಮಾಡತಕ್ಕ ಕೆಲಸಗಳನ್ನುಸುರಿದರು. ಎಲ್ಲರೂ ಗೌಡರಂದಂತೆ ನಡಕೊಳ್ಳುವೆವೆಂದರು.

ಗೌಡರು ಬರಹೇಳಿದಾಗ ಮಮ್ಮುಂಞ ಬ್ಯಾರಿಗಳು ಬಂದರು. ಊರಲ್ಲಿ ಗೌಡರ ವ್ಯಕ್ತಿತ್ವವು ಎಷ್ಟರಮಟ್ಟಿಗಿದೆ ಎಂದು ಅವರರಿತಿದ್ದರು. "ಕೃಷ್ಣ ಭಟ್ಟರ ಮಾತಿನಂತೆ ನಡೆದರೆ ಲಾಭ ಹೇರಳ ದೊರಕಿದರೂ ಗೌಡರಿಗೆದುರುನಿಂತರೆ ಊರಲ್ಲಿ ಉಳಿಗಾಲವಿಲ್ಲ, ಅನರ್ಥ ಪರಂಪರೆಗಳ ನ್ನೆದಿರಸಬೇಕು" ಎಂದು ಮಮ್ಮುಂಞ ಬ್ಯಾರಿಗಳಿಗೆ ತಿಳಿಯಿತು. "ಗೌಡ ರಂದಂತೆ ನಡೆಯುವವನಾನೆ"ಂದು ನುಡಿದರು. ತಲೆ ತಗ್ಗಿಸಿ ಗೌಡರ ಮಾತುಗಳಿಗೊಪ್ಪಿಗೆಯಿತ್ತರು. ಬ್ಯಾರಿಗಳು ಇನ್ನೂರು ರೂಪಾಯಿಗಳನ್ನು ಇಸಕೊಂಡು ಮೋಲ್ಚೀಟನ್ನು ಗಜಾನನ ಭಟ್ಟರಿಗಿತ್ತರು. ಸಹೋದರ ರಿಬ್ಬರೂ ಗಜಾನನ ಭಟ್ಟರೊಡಗೂಡಿ ಗೌಡರ ಸಹಕಾರ ಪಡದು ತಮ್ಮ ತಂದೆಯವರಾದ ವಾಸುದೇವ ಭಟ್ಟರ ಜಮೀನನ್ನು ಸ್ವಾಧೀನ ಪಡಿಸಿಕೊಂಡರು. ಹಾ! ಹಾ! ಎನ್ನುವದರೊಳಗೆ ಇಷ್ಟೆಲ್ಲಾ ಕೆಲಸಗಳು ಜರಗಿದವು. ಆಸ್ತಿ ಕೈತಪ್ಪಿದನಂತರವೇ ಕೃಷ್ಣ ಭಟ್ಟರಿಗೂ ಊರವರಿಗೂ ಈ ಸುದ್ದಿ ತಿಳಿಯಿತು. "ಹರಾತ್ತಾಗಿ ನಂಬಿದ ಗೆಳೆಯ ಮೋಸಪಡಿಸಿ ದನು. ಜಮೀನು ವಿರೋಧಿಗಳ ವಶವಾಯಿತು. ಇನ್ನೇನೆಲ್ಲಾ ಆಗಲಿ ದೆಯೋ?" ಎಂದು ಕೃಷ್ಣ ಭಟ್ಟರ ಹೃದಯ ಹೇಳತೊಡಗಿತು. ತನ್ನೂರು ಸಂಪೂರ್ಣ ತನಗೆ ವಿರುದ್ಧವಾಗಿ ಯುದ್ಧಸಾರಿದೆ ಎಂದ ವರಿಗೆ ತೋರಿತು.

ಆಸ್ತಿ ಸ್ವಾಧೀನವಾದ ನಂತರ ಕೃಷ್ಣ ಭಟ್ಟರನ್ನು ಹೇಗೆ ಬೇಕಾ ದರೂ ಕುಣಿದಾಡಿಸ ಬಹುದಾಗಿತ್ತು. ಆದರೆ ನ್ಯಾಯವಾಗಿ ಕೃಷ್ಣ ಭಟ್ಟರಿಗೆ ಸಲತಕ್ಕ ಹಕ್ಕನ್ನು ಕೊಟ್ಟು ನೆಮ್ಮದಿಯಿಂದಿರುವುದು ಉತ್ತಮ ವೆಂದು ಗೌಡರೂ ಗಜಾನನ ಭಟ್ಟರೂ ನಿರ್ಣೈಸಿದರು. "ಅಣ್ಣನಿಗೆ ಸಲಲಿರುವುದು ಸಲ್ಲಲಿ. ಅವರೆಷ್ಟು ದುರಾಚಾರ ವೆಸಗಿದರೂ ನಮ್ಮಂತೆಯೇ ತಂದೆಯವರ ಬಸಿರಲ್ಲಿ ಬಂದವರು. ಅವರದನ್ನು ನಾವು ನುಂಗಿದೆವೆಂಬ ಅಪವಾದ ಬೇಡ" ಎಂದು ಅನಂತ ಭಟ್ಟರೂ ಪದ್ಮನಾಭ ಭಟ್ಟರೂ ಹೇಳಿದರು.

ಗೌಡರೆಂದರೆ ಯಃಕಶ್ಚಿತ್ ಹುಲು ಮನುಷ್ಯರೆಂದು ಕೃಷ್ಣ ಭಟ್ಟರು ಭಾವಿಸುವುದು ಬೇಡ. ಈಗಲಾದರೂ ಬುದ್ಧಿ ಬಂತೇ? ಇನ್ನಾದರೂ ಇದ್ದುದನ್ನು ನ್ಯಾಯಪ್ರಕಾರ ಪಡಕೊಳ್ಳಲೊಪ್ಪಿಗೆಯಿದ್ದರೆ ಪಂಚಾಯಿತಿಕೆಗೆ ಕೈ ಜೋಡಿಸಿ ಬರಲಿ. ಹಾರಾಡಿದರೆ ಜಾಗ್ರತೆ. ಮನೆಯ ಹಣದಿಂದಲೇ ಅಂಗಡಿಯ ವ್ಯಾಪಾರವೂ ಸಾಗುತ್ತಿದೆ. ಅಂಗಡಿಯ ಸಾಮಾನುಗಳೂ ಮನೆಯ ಸೊತ್ತುಗಳು. ಹೆಚ್ಚೊಂದು ಉದ್ಧಟವೃತ್ತಿ ತೋರಿದರೆ ಅಂಗಡಿಯನ್ನೂ ಕೊಳ್ಳೆ ಹೊಡೆಯಿಸುವೆನು. ಕುತ್ತಿಗೆಗೆ ಕೈಯಿಕ್ಕಿ ತಮ್ಮನನ್ನು ದೂಕಿದಂತೆ ನಿಮ್ಮನ್ನೂ ದೂಡಿಸುವೆ. ಕೋರ್ಟು ಗೀರ್ಟು ಗೌಡರೆದುರು ಏನೂ ಪ್ರಯೋಜನವೀಯದು. ಮರ್ಯಾದೆ ಯಿಂದ ಬರಲಿ" ಎಂದು ಗೌಡರು ಕೃಷ್ಣ ಭಟ್ಟರಿಗೆ ಹೇಳಿ ಕಳು ಹಿಸಿದರು. ಅಭಿಮಾನಬಿಡದಿದ್ದರೂ ತಲೆ ತಾನಾಗಿ ಕೃಷ್ಣ ಭಟ್ಟರದು ತಗ್ಗಿತು. ಆಸ್ತಿ ಸ್ವಾಧೀನಮಾಡಿಸಿಕೊಂಡಂತೆ ಕಣ್ಣು ಮುಚ್ಚಿ ತೆರೆಯು ವುದರೊಳಗೆ ಅಂಗಡಿಯನ್ನೂ ಆಕ್ರಮಿಸಿದರೆ ತನಗೆ ಬರಿಗೈಯೇ ಗತಿ ಯಾಗುವುದು. ತನ್ನಂತೆ ತಮ್ಮಂದಿರೂ ಹಕ್ಕುದಾರರಾಗಿರುವಾಗ ಅವರ ಹಕ್ಕನ್ನು ನುಂಗಿಬಿಡುವೆನೆಂದು ಯೋಚಿಸುದುದು ತಪ್ಪು. ಇನ್ನು ಇನ್ನೊಬ್ಬರದನ್ನು ನುಂಗುವಾಸೆ ಮಣ್ಣು ಗೂಡಿತು. ತನ್ನದನ್ನಾದರೂ ಉಳಿಸಿಕೊಳ್ಳಬೇಕಾದರೆ ಗೌಡರ ಕಾಲ ಬಳಿಸರಿಯಬೇಕು ಎಂದು ಯೋಚಿಸಿ ಪುಚ್ಚ ಹಿಡಿದವರಂತಾದರು ಕೃಷ್ಣ ಭಟ್ಟರು. ಪಂಚಾ ತಿಕೆಗೆ ಗೌಡರಲ್ಲಿಗೆ ತಿಳುಹಿದಂತೆ ಬಂದರು.

ಪಂಚಾಯಿತಿಕೆ ಮಾಡಿ ಸರಿಯಾಗಿ ವಿಭಾಗಿಸಿಕೊಡುವ ಸರ್ವಾಧಿ ಕಾರವನ್ನು ಕೃಷ್ಣ ಭಟ್ಟರೂ ಉಳಿದವರೂ ಗೌಡರಿಗಿತ್ತರು. ವಾಸುದೇವ ಭಟ್ಟರು ಸಂಪಾದಿಸಿದ ನಗದಿ ಹಣ ಕೃಷ್ಣ ಭಟ್ಟರ ದುರ್ವರ್ತನೆಯಿಂದ ಧಾನಾಹಾನಿಯಾಗಿತ್ತು. "ನಗದಿ ಹಣ ಖರ್ಚಾಗಿ ಸಾಲಸಹ ಆಗಿದೆ. ಇಷ್ಟರ ವರೆಗೆ ಅವಿಭಕ್ತ ಕುಟುಂಬವಾದುದರಿಂದ ಸಾಲವನೆಲ್ಲರಿಗೂ ಸರಿಸಮಾನವಾಗಿ ಹಂಚಿ ಹಾಕಬೇಕು" ಎಂದು ಕೃಷ್ಣ ಭಟ್ಟರು ವಾದಿಸಿದರು. ನಗದಿ ಹಣ ಹೇಗೆ ಖರ್ಚಾಯಿತು? ಸಾಲ ಹೇಗೆ ಬಂತು? ಎಂದು ಕೇಳಿದರೆ ಸರಿಯಾದ ಉತ್ತರಕೊಡಲು ಕೃಷ್ಣ

ಭಟ್ಟರಿಂದಾಗಲಿಲ್ಲ. ಸರಿಯಾದ ಲೆಕ್ಕಪತ್ರ ತೋರಿಸೆಂದು ತಮ್ಮಂದಿರಂದಾಗ ಲೆಕ್ಕ ಪತ್ರ ಇಲ್ಲ ಎಂಬ ಉತ್ತರ ಮಾತ್ರ ಕೊಟ್ಟರು. "ನಗದಿ ಹಣ ಅಷ್ಟೊಂದು ಇದ್ದುದು ಖರ್ಚಾಗಿ ಸಾಲ ಹೇಗೆ ಬಂತೆನ್ನುವದನ್ನು ನಿನ್ನಿಂದ ಹೇಳಲಸಾಧ್ಯವಾಗದೆ ಇದ್ದೀತೆ. ಎಲ್ಲಾ ಕಂಡಾಬಟ್ಟೆ ಮಾಡಿದಿರಿ ನಗದಿ ಹಣ ಹೋದುದು ಹೋಗಲಿ. ಕಡಿದ ನೀರು ಕಟ್ಟಕ್ಕೆ ಬರಲಾರದು. ಸಾಲವಾಗಿದೆಯೆಂದರೆ ಅದಕ್ಕೆ ತಮ್ಮಂದಿರು ಜವಾಬ್ದಾರರಲ್ಲ. ನೀನು ಮಾಡಿದ ಸಾಲ ನಿನಗೆ. ಅದನ್ನು ನೀನು ತೀರಿಸಬೇಕು" ಎಂದು ಗೌಡರನ್ನುವಾಗ ಕೃಷ್ಣ ಭಟ್ಟರು ಪಿಳಿಪಿಳಿ ಮಾಡಿದರು. "ಆದರೊಂದು ವಿಷಯದಲ್ಲಿ ನೀವು ನನಗೆ ದಯೆದೋರಬೇಕು ನನ್ನ ಸಾಲ ನನಗೆ ಬಿಡುವುದರೊಂದಿಗೆ ಅಂಗಡಿಯ ಸಾಮಾನುಗಳೂ ನನಗೆ ಸಿಗುವಂತೆ ಮಾಡಬೇಕು." ಎಂದು ದೈನ್ಯತೆಯಿಂದ ಸೆರೆಗೊಡ್ಡಿ ಬೇಡಿದರು. "ಆಗಲಿ. ನಿಮ್ಮ ಸಾಮಾನೂ ನಿಮ್ಮ ಸಾಲವೂ ನಿಮಗೆ ಇರಲಿ, ನಮಗದು ಬೇಡ" ಎಂದು ತಮ್ಮಂದಿರನ್ನುವಾಗ ಕೃಷ್ಣ ಭಟ್ಟರ ಮುಖ ಅರಳಿತು. ಕೃಷ್ಣ ಭಟ್ಟರಿಗೆ ಹಣಬೇಕಾದುದೋ ಜಮೀನೋ ಎಂದು ತದನಂತರ ಗೌಡರು ಪ್ರಶ್ನಿಸಿದರು ಜಮೀನೇ ಆಗಬೇಕೆಂದಿಲ್ಲ. ಹಣಸಿಕ್ಕಿದರೆ ಬಹಳ ಒಳ್ಳೆಯದು ಅಂದರು ಕೃಷ್ಣ ಭಟ್ಟರು. ಗೌಡರು ಆಸ್ತಿ ಮನೆ ಮಠ ಸಾಮಾನುಗಳಿಗೆ ಒಟ್ಟು ಇಪ್ಪತ್ತೊಂದು ಸಾವಿರ ರೂಪಾಯಿ ಬೆಲೆ ಕಟ್ಟಿದರು. "ಏಳು ಸಾವಿರ ರೂಪಾಯಿ ತಮ್ಮಂದಿರು ಅಣ್ಣನಿಗೆ ಕೊಡಬೇಕು. ಆಸ್ತಿ ಸರ್ವಸ್ವವೂ ತಮ್ಮಂದಿರಿಗಾಯಿತು" ಎಂದು ತೀರ್ಮಾನಿಸಿದರು ಗೌಡರ ತೀರ್ಮಾನಕ್ಕೆ ಎಲ್ಲರೂ ಸಮ್ಮತಿ ಇತ್ತರು. ಗಜಾನನ ಭಟ್ಟರು ತನ್ನ ಸಣ್ಣ ಭಾವಂದಿರಿಗೆ ಹಣ ಕಡಕೊಟ್ಟು ಸಹಕರಿಸಿದರು ನಾಲುವಟ್ಟೆ ರಿಜಿಸ್ಟ್ರಾರರ ಸಮಕ್ಷಮ ರಿಜಿಸ್ಟ್ರಾಯಿತು. ಸರಿಯಾಗಿ ನೋಡಿಕೊಂಡು ಬಂದಲ್ಲಿ ಸಾಲ ದೊಡ್ಡದಲ್ಲ. ನಾಲ್ಕೈದು ವರ್ಷಗಳಲ್ಲಿ ಸಾಲಮುಗಿಸಿ ಬಿಡಬಹುದು. ಜಮೀನಾದರೂ ಉಳಿಯಿತಲ್ಲ. ಎಂದು ಅನಂತ ಭಟ್ಟರೂ ಪದ್ಮನಾಭ ಭಟ್ಟರೂ ಸಮಾಧಾನಗೊಂಡರು. "ಹಣ ಏಳು ಸಾವಿರ ರೂಪಾಯಿ ಒಂದೇ ಗಂಟಿಗೆ ಸಿಕ್ಕಿತಲ್ಲ. ಇದನ್ನು ಅನೇಕ

ವಹಿವಾಟುಗಳಲ್ಲುಪಯೋಗಿಸಿ ಇಂತಹ ಹತ್ತಾರು ಜವಿಾನುಗಳನ್ನು ಸಂಪಾದಿಸುವ ಸಾಮರ್ಥ್ಯ ನನಗಿದೆ" ಎಂದು ಕೃಷ್ಣ ಭಟ್ಟರು ಹೆಗ್ಗಳಿಕೆ ಹೇಳಿಕೊಂಡರು.

## ಸುಳಿ ೯.

ಕೃಷ್ಣ ಭಟ್ಟರೇಳುಸಾವಿರ ರೂಪಾಯಿ ಸಿಕ್ಕಿ ಹಗಲುಗನಸು ಕಾಣುತ್ತಿರುವುದೂ ಲಲಿತೆ ಬೇನೆ ಬೀಳುವುದೂ ಸರಿಹೋಯಿತು. ಕೃಷ್ಣ ಭಟ್ಟರ ಒದೆ ತಿಂದ ನಂತರ ಲಲಿತೆಗೆ ಸಂಕಟ ತಪ್ಪಲಿಲ್ಲ. ಹೊಟ್ಟೆಯಲ್ಲೊಂದು ಬಗೆಯ ನೋವು, ಆಹಾರಕ್ಕೆ ರುಚಿಯಿಲ್ಲ. ಮನಸ್ಸಿಗೆ ನೆಮ್ಮದಿಯಿಲ್ಲ. ತಂದೆತಾಯಿಗಳೆಷ್ಟು ಸಮಾಧಾನ ಹೇಳಿದರೂ ಮನದ ಕೊರಗು ಅಳಿಯುತ್ತಿರಲಿಲ್ಲ. ಶಂಭು ಭಟ್ಟರೂ ವೆಂಕಮ್ಮನೂ ಸಾಧ್ಯವಿದ್ದಷ್ಟು ರೋಗೋಪಶಮನಕ್ಕೆ ಔಷದ ಮಾಡುತ್ತಿದ್ದರು. ಲಲಿತೆ ತವರೂರಿಗೆ ತೆರಳಿದ ನಂತರ ಕೃಷ್ಣ ಭಟ್ಟರು ಆಕೆಯನ್ನು ಕಾಣಲೂ ಆರೋಗ್ಯ ಪರಿಸ್ಥಿತಿಯೆಂತಿದೆಯೆಂದರಿಯಲೂ ಮಾವನ ಮನೆಗೆ ಕಾಲಿರಿಸಲಿಲ್ಲ. ಲಲಿತೆ ತವರೂರಿಗೆ ತೆರಳಿದುದು ಕೃಷ್ಣ ಭಟ್ಟರಿಗೆ ಅಡಚಣೆಯೊಂದು ತಪ್ಪಿದ ಹಾಗಾಯಿತು. ಕೈಹಿಡಿದವರು ಒಮ್ಮೆಯಾದರೂ ನೋಡಿ ಮಾತನಾಡಲು ಬಾರದಿದ್ದುದರಿಂದ ಲಲಿತೆ ನಿರ್ವಿಣ್ಣಳಾಗಿದ್ದಳು. ತಾನವರಿಗೆ ಬೇಡವಾದೆನಲ್ಲಾ! ಅಯ್ಯೋ ವಿಧಿಯೇ! ಪತಿಯ ಪ್ರೇಮ ಪಡೆಯದ ಪತ್ನಿ ಸುಡುಗಾಡ ಕುಸುಮ ಸಮಾನಳಲ್ಲವೇ. ಆಕೆಯ ಜೀವನ ನಿರರ್ಥಕ ಎಂದು ಕೊರಗುತ್ತಿದ್ದಳು. ಮಾನಸಿಕ ಚಿಂತೆಯೊಂದು ಕಡೆ. ಗರ್ಭಿಣಿಯರಿಗೆ ಸಹಜವಾದ ಶ್ರಮ ಇನ್ನೊಂದೆಡೆ. ಅನುಭವಿಸಿದ ಮತ್ತು ಅನುಭವಿಸುತ್ತಿರುವ ಸಂಕಟಗಳ ಜಂಜಡ ಮಗುದೊಂದೆಡೆ ಇಂತಾಕೆ ಬಸವಳಿದು ಜೀವದಲ್ಲಿದ್ದು ಫಲವಿಲ್ಲವೆಂದು ತಿಳಿಯುತ್ತಿದ್ದಳು.

ಅಕಸ್ಮಾತ್ ಗುಣಮುಖವಾಗಿದ್ದ ಲಲಿತೆಯ ನೋವು ಮಿತಿಮಿಾರಿತು. ಲಲಿತೆ ಒಂದೇಸವನೆ ಕಣ್ಣೀರಿಡುತ್ತಾ ಹೊರಳಾಡ ತೊಡಗಿದಳು. ತಾನಿನ್ನು ಬದುಕಲಾರೆ. ಸಂಕಟ ತಡೆಯಲಾರೆ. ಹೊಟ್ಟೆ

ಯೊಳಗೇ ನೋವು ಆಗುತ್ತಿದೆಯೆಂದು ಕಷ್ಟದಲ್ಲುಸುರಿದಳು. ಪ್ರಸವ ವೇದನೆ ಇರಬಹುದೆಂದು ವೆಂಕಮ್ಮ ತರ್ಕಿಸಿದಳು. ಹಳ್ಳಿಯ ನುರಿತ ಸೂಲಗಿತ್ತಿಯರು ಬಂದರು. ಯಾರೇನೇನುಪಚಾರ ಮಾಡಿದರೂ ಪ್ರಯೋಜನ ಕಂಡುಬರಲಿಲ್ಲ. ಶಂಭು ಭಟ್ಟರು ಹೌ ಹಾರಿದರು. "ನನ್ನ ಅಂತಿಮ ಬಯಕೆ ಅವರನ್ನೊಮ್ಮೆ ಕಣ್ಣಾರೆ ಕಾಣಬೇಕೆಂದು" ಲಲಿತೆ ತಡವರಿಸಿ ನುಡಿದಳು. ಶಂಭು ಭಟ್ಟರು ಕೃಷ್ಣ ಭಟ್ಟರನ್ನು ಬರಹೇಳಲು ಜನವನ್ನಟ್ಟಿದರು. ಡಾಕ್ಟರರೇ ಗತಿಯೆಂದು ಶಂಭು ಭಟ್ಟರವಸರದಲ್ಲಿ ಡಾಕ್ಟರರನ್ನು ಕರತರಲು ಹೊರಟರು. ಎಷ್ಟು ಬೇಗನೆ ಸಾಧ್ಯವೋ ಅಷ್ಟು ಬೇಗನೆ ಡಾಕ್ಟರರನ್ನು ಕರತಂದರು. ಆದರೆ ಪರಿಸ್ಥಿತಿ ಕೈಮೀರಿತ್ತು. ಲಲಿತೆ ದೀರ್ಘ ಶ್ವಾಸವೊಯ್ಯುತ್ತಿದ್ದಳು. ಡಾಕ್ಟರರು ಪರೀಕ್ಷಿಸಿದರು. "ಒಂದು ಘಂಟೆ ಮೊದಲಾಗಿದ್ದರೆ ಜೀವ ವುಳಿಯುತಿತ್ತು. ಎಲ್ಲವೂ ಸಾಧ್ಯವಿತ್ತು. ಇನ್ನೀಗ ಅಸಾಧ್ಯ. ಮಗು ಹೊಟ್ಟೆಯೊಳಗೆ ಮೃತಪಟ್ಟು ಹೊರ ಬಾರದಿದ್ದುದರಿಂದ ಪರಿಣಾಮ ವಿಂತಾಯ್ತು" ಎಂದು ಡಾಕ್ಟರರನ್ನುವುದೂ ಅಂತಿಮ ಶ್ವಾಸ ಹೊರ ಬೀಳುವುದೂ ಸರಿಯಾಯಿತು. ಡಾಕ್ಟರರಿಗೆ ಬಂದ ಚಾರ್ಜು ಸಿಕ್ಕಿತು. ಅವರು ಹಿಂತಿರುಗಿದರು. ಶಂಭು ಭಟ್ಟರೂ ವೆಂಕಮ್ಮನೂ ಗೋಳೋ ಎಂದಳತೊಡಗಿದರು. ಮನೆ ಮಸಣದಂತಾಯಿತು. "ಒತ್ತಾಯಕ್ಕೆ ಕೃಷ್ಣ ಭಟ್ಟನ ರುಜು" ಎಂಬಂತೆ ಆಗತಾನೆ ಕೃಷ್ಣ ಭಟ್ಟರೂ ಬಂದು ತಲಪಿದರು. ಕಣ್ಣು ಕಟ್ಟಿಗೆರಡು ದುಃಖೋದ್ಗಾರಗಳನ್ನೆತ್ತಿ ಉತ್ತರ ಕ್ರಿಯೆಗಳಲ್ಲಿ ನಿವೃತ್ತಿಯಿಲ್ಲದೆ ಸಹಕರಿಸಿ ಕೃಷ್ಣ ಭಟ್ಟರು ಹಿಂತಿರುಗಿ ದರು.

ಏಳು ಸಾವಿರ ರೂಪಾಯಿಗಳು ಕೃಷ್ಣ ಭಟ್ಟರ ಕೈಗೆ ಬಂದಿವೆ ಯಷ್ಟೆ. ಅದನ್ನೆಂತು ಮುಗಿಸುವುದೆಂದೇ ಕೃಷ್ಣ ಭಟ್ಟರ ಯೋಚನೆ ಯಾಯಿತು. "ಪೇಟೆಯಿಂದ ಸಾಮಾನು ತಂದು ಹಳ್ಳಿಯಲ್ಲಿ ವ್ಯಾಪಾರ ಮಾಡಿದರೆ ಫಲವಿಲ್ಲ. ಜನರು ಸಾಲ ಕೊಂಡುಹೋಗಿ ವಾಪಾಸು ಕೊಡುವಂತಿಲ್ಲ. ಹಳ್ಳಿಯಲ್ಲಿ ವ್ಯಾಪಾರ ಮಾಡಿ ಇಷ್ಟರವರೆಗೆ ಕೈ ಸುಟ್ಟುಕೊಂಡುದೇ ಧಾರಾಳ ಸಾಕು. ಅಲ್ಲದೆ ಈ ಊರಲ್ಲಿ ವಿರೋಧಿಗಳ

ಪಂಗಡ ಬೆಳೆದಿದೆ. ಇನ್ನು ಪೇಟೆಯಿಂದ ಸಾಮಾನು ತಂದು ಇಲ್ಲಿ ಅಂಗಡಿಯಲ್ಲಿ ಕುಳಿತು ಮಾರುವ ಕೆಲಸ ಬೇಡ. ಹಳ್ಳಿಯಿಂದ ಅಡಿಕೆ, ಕಾಳುಮೆಣಸು, ಗೇರುಬೀಜ ಮೊದಲಾದುವನ್ನು ಪಡೆದು ಪೇಟೆಗೆ ಸಾಗಿಸಿ ಲಾಭ ಪಡೆಯುವುದು ಉತ್ತಮ." ಎಂದು ಕೃಷ್ಣ ಭಟ್ಟರು ತಮ್ಮ ಮುಂದಿನ ವ್ಯವಸಾಯದ ಕುರಿತು ಯೋಚನೆ ಮಾಡಿ ಒಂದು ನಿಶ್ಚಯಕ್ಕೆ ಬಂದರು. ಹಳ್ಳಿಯಿಂದ ಅಡಿಕೆ ಮೊದ ಲಾದುವನ್ನು ಪಡೆದು ತಮ್ಮ ಅಂಗಡಿಯಲ್ಲಿ ಶೇಖರಿಸಿದರು. ಶೇಖ ರಿಸಿದ ಸಾಮಾನುಗಳನ್ನು ಮಾರಾಟಕ್ಕೆ ಸಿದ್ಧಗೊಳಿಸಿ ಪೇಟೆಗೆ ಸಾಗಿ ಸಲು ಪ್ರಾರಂಭಿಸಿದರು. ಹಳ್ಳಿಗರು ಪೇಟೆಯಲ್ಲಿರುವ ಧಾರಣೆಯ ಬೆಲೆ ಸದ್ಯ ನಗದಾಗಿ ಸಿಕ್ಕುವುದಿದ್ದರೆ ಕುಳಿತಲ್ಲೇ ಸಾಮಾನುಗಳನ್ನು ವಿಕ್ರಯಿಸುವುದು ಸಹಜವಷ್ಟೆ. ಪೇಟೆಯ ಧಾರಣೆಗಿಂತ ಒಂದು ರೂಪಾಯಿ ಹೆಚ್ಚಿಗೆಗೆ ಕೃಷ್ಣ ಭಟ್ಟರು ಸಾಮಾನುಗಳನ್ನು ಕೊಂಡು ಕೊಳ್ಳಲು ತಯಾರಾಗಿರುವಾಗ ಸಾಮಾನುಗಳು ಅವರಿಗೆ ಧಾರಾಳ ಸಿಗ ತೊಡಗಿದುವು. ಕೆಲವು ದಿನ ಹಳ್ಳಿಗಳಲ್ಲಿ ಸಾಮಾನುಗಳನ್ನು ಸಂಗ್ರ ಹಿಸುವುದು. ಸಂಗ್ರಹಿಸಿದ ಸಾಮಾನುಗಳನ್ನು ಪೇಟೆಗೆ ಸಾಗಿಸಿ ಅಲ್ಲಿ ಕೆಲವು ದಿನ ಅವು ಮಾರಾಟವಾಗುವುದನ್ನು ಕಾಯುತ್ತಾ ಕುಳಿತಿರು ವುದು. ಹೀಗೆ ಪೇಟೆ ಮತ್ತು ಹಳ್ಳಿಗಳಲ್ಲಿ ಕೃಷ್ಣ ಭಟ್ಟರು ಇರ ತೊಡಗಿದರು.

ಕೃಷ್ಣ ಭಟ್ಟರು ಹಳ್ಳಿಯಲ್ಲಿ ಸಂಗ್ರಹಿಸಿದ ಸಾಮಾನುಗಳನ್ನು ಮಾರಾಟಕ್ಕೆ ಪೇಟೆಗೆ ಮಂಗೇಶ ಮಲ್ಯರ ಭಂಡಸಾಲೆಗೆ ಸಾಗಿಸಲು ನಿಶ್ಚಯಿಸಿದರು. ಮಂಗೇಶ ಮಲ್ಯರು ಮಂಗಳೂರ ಹೆಸರಾಂತ ಸಾಹು ಕಾರರು. ಅವರ ಭಂಡಸಾಲೆ ದೊಡ್ಡದು. ಅವರಿಗೆ ಕಾಯಂ ಕುಳ ವಾರುಗಳೇ ಅಸಂಖ್ಯ ಇವೆ. ಒಮ್ಮೆ ಅವರ ಭಂಡಸಾಲೆಗೆ ಕಾಲಿರಿಸಿ ದವರು ಅದನ್ನು ಬಿಟ್ಟು ಬೇರೆಡೆಗೆ ಹೋಗುತ್ತಿರಲಿಲ್ಲ. ಅವರು ಸಾಮಾನುಗಳಿಗೆ ಧಾರಾಳ ಸಾಲ ಕೊಡುತ್ತಿದ್ದರು. ಖಾತ್ರಿಯ ಕುಳ ವಾರುಗಳಿಗೆ ಮುಂದಿನ ಫಸಲಿಗೂ ಹಣ ಕಡ ಕೊಡುತ್ತಿದ್ದರು. ಅವರು ಖಾತ್ರಿಯ ಜನರೆಂದು ಎಲ್ಲರ ನಂಬುಗೆ. ಎಷ್ಟೋ ಲಕ್ಷ

ಹಣ ಅವರಲ್ಲಿದೆ. ಅವರಿಗೆ ಹಣದ ಮುಗ್ಗಟ್ಟೆಂಬುದು ಇಲ್ಲ, ಬರು ವಂತೆಯೂ ಇಲ್ಲ ಎಂದವರ ಗಿರಾಕಿಗಳನ್ನುತ್ತಿದ್ದರು. ಕೃಷ್ಣ ಭಟ್ಟರು ಸಾಮಾನುಗಳನ್ನು ಪಾರ್ಸೆಲ್ ಮಾಡಿ ಪಾಸನ್ನು ಹಿಡಕೊಂಡು ಮಂಗೇಶ ಮಲ್ಯರಲ್ಲಿಗೆ ಹೋದಾಗ ಅವರಿಗೆ ಬಹು ಸಂಭ್ರಮದ ಸ್ವಾಗತ ದೊರೆಯಿತು. ಲೋಡಿಗೆ ಬೆಲೆ ಬಾಳುವ ಕಂಬಳಿಯನ್ನು ಹಾಸಿ ಕೃಷ್ಣ ಭಟ್ಟರನ್ನು ಅದರಲ್ಲಿ ಕುಳ್ಳಿರಿಸಿದರು. ಕಾಫಿ ತರಿಸಿ ಕೊಟ್ಟರು. ಸೌಹಾರ್ದ ಪೂರ್ವಕ ಮಾತನಾಡಿಸಿದರು. “ನಾನೊಬ್ಬ ವ್ಯಾಪಾರಿ. ಧಾರಾಳ ಅಡಿಕೆ ಕಾಳುಮೆಣಸು ಗೇರುಬೀಜಗಳನ್ನು ನಮ್ಮಲ್ಲಿಗೆ ಜನರು ತರುತ್ತಾರೆ. ನಾನವುಗಳನ್ನು ನಿಮ್ಮಲ್ಲಿಗೆ ಕಳುಹು ವೆನು. ನೀವದನ್ನು ನಾನಂದಂತೆ ಸರಿಯಾದ ಬೆಲೆಗೆ ಮಾರಾಟ ಮಾಡಬೇಕು. ಕಳುಹಿಸಿದ ಮತ್ತು ಕಳುಹಲಿರುವ ಸಾಮಾನುಗಳನ್ನು ನೋಡಿ ಎಷ್ಟು ಸಾಧ್ಯವೋ ಅಷ್ಟು ಹಣ ನನಗೆ ಮುಂಗಡ ಕೊಡ ಬೇಕು. ಹಾಗಾದಲ್ಲಿ ನಮ್ಮ ಸಾಮಾನು ಸಂಪೂರ್ಣ ನಿಮಗೆ ಕಳುಹುವೆನು. ಈಗ ಸ್ವಲ್ಪ ತಂದಿರುವೆ.” ಅಂದರು ಕೃಷ್ಣ ಭಟ್ಟರು. “ಓ ಹೋ ಧಾರಾಳವಾಗಿ ನಿಮ್ಮ ಸಾಮಾನು ನಮ್ಮದೆಂದೇ ತಿಳಿದು ಮಾರಾಟ ಮಾಡುವವರು ನಾವು” ಎಂದರು ಮಂಗೇಶ ಮಲ್ಯರು. ಮಂಗೇಶ ಮಲ್ಯರು ಪಾಸ್ ತಕ್ಕೊಂಡರು. ಎಡ್ವಾನ್ಸ್ ಹಣ ಕೊಟ್ಟರು. ಕೃಷ್ಣ ಭಟ್ಟರ ವಹಿವಾಟು ಸ್ವಂತ ಹಣದಿಂದಲೂ ಎಡ್ವಾನ್ಸ್ ಸಿಕ್ಕಿದ ಹಣ ದಿಂದಲೂ ಭರ್ಜರಿಯಾಗಿ ಸಾಗತೊಡಗಿತು ಕೃಷ್ಣ ಭಟ್ಟರ ರೀತಿ ನೋಡಿ ಹಳ್ಳಿಗರು ಕೃಷ್ಣ ಭಟ್ಟರ ಕೈಯಲ್ಲಿ ಹತ್ತೆಪ್ಪತ್ತು ಸಾವಿರ ರೂಪಾಯಿಗಳಿವೆಯೆಂದು ಭ್ರಮಿಸತೊಡಗಿದರು. “ಯಜಮಾನಿಕೆಯು ನಮಗು ಧಾರಾಳ ಹಣ ಕೈಯಲ್ಲಿ ಮಾಡಿಕೊಂಡಿರಬೇಕು. ಈಗ ವಿಭಾಗವಾಗುವಾಗ ಸಿಕ್ಕಿದ ಹಣ ಪ್ರತ್ಯೇಕ. ಲಾಭಸಿಕ್ಕಿದ ಹಣ ಪ್ರತ್ಯೇಕ. ನಿಜವಾಗಿಯೂ ಹಣ ಧಾರಾಳವಿರದೆ ಇಂತ ರೀತಿ ಬರ ಲಾರದು” ಎಂದು ಊಹಾಪೋಹ ಮಾಡತೊಡಗಿದರು.

ಪೇಟೆಯಿಂದ ಹಳ್ಳಿಗೆ ಬಂದ ಕೃಷ್ಣ ಭಟ್ಟರೊಡನೆ ಅಡಿಕೆಯೇ ಮೊದಲಾದುವುಗಳ ಬೆಲೆ ತಿಳಿಯಲಾತುರ ಪಡುವ ಜನರು ಬಹು

ಮಂದಿ. ಅಂತಹ ಜನರೊಂದಿಗೆ ಚಕ್ಕಂದ ಹೊಡೆಯುತ್ತ ಸಾಮಾನುಗಳ ಬೆಲೆಯ ಪಟ್ಟಿಯನ್ನು ವಿವರಿಸಿ ಬಹುದೊಡ್ಡ ಜನವೆನ್ನಿಸಿಕೊಳ್ಳಲು ಕೃಷ್ಣ ಭಟ್ಟರೂ ಉತ್ಸಾಹಪಡುತ್ತಿದ್ದರು. ಆಗಾಗ ಪೇಟೆಯ ಸುದ್ದಿ ತಿಳುಹಿ ವ್ಯಾಪಾರದ ಗುಟ್ಟನ್ನೂ ವ್ಯಾಪಾರದ ಕ್ರಮವನ್ನೂ ಹಳ್ಳಿಗರ ಮನರಂಜನೆ ಯಾಗುವಂತೆ ವರ್ಣಿಸಿ ತನ್ನ ಹೆಗ್ಗಳಿಕೆ ತೋರಿಸುವುದು ಕೃಷ್ಣ ಭಟ್ಟರ ಪ್ರಾಮುಖ್ಯ ಕೆಲಸ. "ಎಲ್ಲಿ ನೋಡಿದರಲ್ಲಿ ವ್ಯಾಪಾರದ ಗುಟ್ಟರಿತ ತನಗೆ ಪ್ರತಿಯೊಂದು ಸಾಮಾನುಗಳಲ್ಲೂ ಲಾಭ. ಬೊಂಬಾಯಿಯ ಸೇಟುಗಳಿಬ್ಬರು ನನ್ನ ಪರಮಾಪ್ತರು. ಅವರು ಎಲ್ಲ ಸಂಗತಿಯನ್ನೂ ನನಗರುಹಿಬಿಡುತ್ತಾರೆ. ಇದನ್ನರಿತ ಸಾಹುಕಾರರು ಮರೆಮೋಸ ನನ್ನಲ್ಲಿ ಮಾಡುವುದಿಲ್ಲ. ವಸ್ತ್ರದೊಳಗೆ ಕೈ ಮುಚ್ಚಿಟ್ಟು ಕೈ ಬೆರಳುಗಳ ಸಂಜ್ಞೆಯಲ್ಲಿ ನಡೆಯುವ ಗುಟ್ಟಿನ ವ್ಯಾಪಾರವಾದರೂ ನನ್ನ ಸಾಮಾನುಗಳಿಗೆ ಒಂದು ಪೈ ಸಹ ಕಡಿಮೆಯಾಗುವಂತಿಲ್ಲ. ಅಧಿಕ ಬೆಲೆಗೆ ಮಾರಿ ಕಡಿಮೆ ಬೆಲೆಯ ದಿನದಲ್ಲಿ ಮಾರಾಟವಾಯ್ತೆಂಬ ಮೋಸ ನನ್ನ ಮಟ್ಟಿಗೆ ಮಾತ್ರ ಇಲ್ಲ. ನನ್ನಾಪ್ತರಾದ ಸೇಟುಗಳು "ಮಂಗಳೂರಲ್ಲಿ ನೀವೊಂದು ಭಂಡಸಾಲೆ ತೆರೆಯಬಾರದೇ? ತೆರೆದರೆ ಈ ವ್ಯಾಪಾರಿಗಳಿಗೆ ಮಾರಾಟ ಮಾಡಿದ ಬಾಬ್ತು ದಲಾಲಿ ಹಣಕೊಡುವುದುಳಿಯುವುದಲ್ಲ" ಎಂದು ಸಲಹೆಕೊಟ್ಟಿರುವರು. ನಾನೂನಹ ಸೇಟುಗಳ ಯೋಚನೆ ಸರಿಯೊಂದು ಒಪ್ಪಿರುವೆ. ಮೆಲ್ಲಗೆ ಮಂಗಳೂರಲ್ಲೊಂದು ಭಂಡಸಾಲೆ ತೆರೆಯಬೇಕೆಂದು ಸನ್ನಾಹಮಾಡುತ್ತಿರುವೆನು" ಎಂದು ಮೊದಲಾಗಿ ಕೃಷ್ಣ ಭಟ್ಟರು ಜಂಭಕೊಚ್ಚುವುದನ್ನು ಹಳ್ಳಿಗರು ಅಹುದೆಂದೇ ಭ್ರಮಿಸುತ್ತಿದ್ದರು.

ಕ್ರಮೇಣ ಕೃಷ್ಣ ಭಟ್ಟರು ಊರಲ್ಲಿ ಅಡಿಕೆ ಮೊದಲಾದುವನ್ನು ಸಂಗ್ರಹಿಸಲು ಕೆಲವು ಜನ ದಲಾಲಿಗಳನ್ನಿಟ್ಟರು. ಹಾಗಾಗಿ ಅವರು ಹಳ್ಳಿಗೆ ಬರುವುದು ಅಪರೂಪವಾಯಿತು. ಹೆಚ್ಚಾಗಿ ಸಾಮಾನುಗಳನ್ನು ಮಾರಾಟ ಮಾಡಿಸಲು ಪೇಟೆಯಲ್ಲೇ ನಿಲ್ಲುತ್ತಿದ್ದರು. ಹೀಗಿರಲು ಮಂಗಳೂರಲ್ಲಿರುವಾಗ ಸಾವಿರಾರು ರೂಪಾಯಿಗಳ ಹಣ ಹಿಡಕೊಂಡು ಘನವಂತರಾದ ಕೃಷ್ಣ ಭಟ್ಟರು ಸಾಮಾನ್ಯ ಬಾಡಿಗೆಯ ಹೋಟೇಲುಗಳಲ್ಲಿ

ವಾಸಿಸುತ್ತಿರಲಿಲ್ಲ. ಹೆಚ್ಚು ರೂಪಾಯಿ ಬಾಡಿಗೆಯು ಕನ್ನಡಿಯಂತೆ ನಿರ್ಮಲವಾಗಿ ಪ್ರತಿಬಿಂಬವೂ ಕೂಡ ಕಾಣುವಂತಿರುವ ನೆಲವುಳ್ಳ ಝಗ ಝಗಿಸುವ ವಿದ್ಯುದ್ದೀಪಗಳುಳ್ಳ ರೇಡಿಯೋ ಗ್ರಾಮಫೋನ್ ಸಕಲರಣೆಗಳುಳ್ಳ ಸುಶ್ರಾವ್ಯ ಸಂಗೀತ ಧ್ವನಿಯಿರುವ ಎಲೆಕ್ಟ್ರಿಕ್ ಫೇನುಗಳುಳ್ಳ ಹೊಟೇಲುಗಳಲ್ಲೇ ವಾಸಿಸುತ್ತಿದ್ದರು. ಹಣ ಕೈಯಲ್ಲಿ ರಣತ್ಕಾರ ವೆಸಗುತ್ತಿರುವಾಗ ಬೇಕುಬೇಕಾದ ಸುಖಸಾಧನಗಳನ್ನೊದವಿಸಿಕೊಳ್ಳುವುದು ಸೂಕ್ತವೆಂದವರಭಿಮತ. ಅಡಿಕೆ ಬಂಡಸಾಲೆಗೆ ಹೋಗುವುದು, ಸಿನಿಮಾ ನೋಡುವುದು, ಕ್ಲಬ್ಬುಗಳಿಗೆ ಸಾಗುವುದು, ವಾಹನಗಳಲ್ಲಿ ತಿರುಗಾಡುವುದು, ಬೇಕುಬೇಕಾದ ವಿನೋದ ವಿಹಾರಗಳನ್ನೆಸಗುವುದು, ಇವೇ ಮೊದಲಾದುವು ಮಂಗಳೂರಲ್ಲಿ ಕೃಷ್ಣ ಭಟ್ಟರು ದಿನನಿತ್ಯ ಮಾಡುವ ಉದ್ಯೋಗಗಳು. ಅಂತೂ ಕೃಷ್ಣ ಭಟ್ಟರು ಇಹಲೋಕವನ್ನು ಸ್ವರ್ಗ ಲೋಕವೆಂದು ಭ್ರಮಿಸಿ ವಿಹರಿಸತೊಡಗಿದರು.

ಮಂಗಳೂರಲ್ಲೂ ದುರ್ಮಾರ್ಗಕ್ಕೆಳೆಯುವ ಗೆಳೆಯರು ಕೃಷ್ಣ ಭಟ್ಟರಿಗೆ ಧಾರಾಳ ದೊರಕಿದರು. ಶ್ರೀಯುತ ವಿಠಲ ಶೇಣೈಗಳು ಕೃಷ್ಣ ಭಟ್ಟರ ಅಚ್ಚುಮೆಚ್ಚಿನ ಗೆಳೆಯರಲ್ಲೊಬ್ಬರು. ಅವರು "ಬಿಡ್ಡಿನ" ದೊಡ್ಡ ಏಜೆಂಟರಾಗಿದ್ದರು "ಬಿಡ್ಡೆಂದರೆ ನೋಡ್ತಿಯೆಂದರೆ ಭಾಗ್ಯವನ್ನು ಪರೀಕ್ಷಿಸುವ ಸಾಧನ ಲಾಭಬರುವ ಸಮಯದಲ್ಲಿ ಇದರಿಂದ ಬರುವ ಲಾಭ ಅಪರಿಮಿತ. ಸುಲಭದಲ್ಲಿ ಭಾಗ್ಯ ಕಣ್ದೆರೆವರೆಗಳಿಗೆಯೊಳಗೆ ಶ್ರೀಮಂತನಾಗುವ ಉಪಾಯ" ಎಂದು ವಿಠಲ ಶೈಣೈಗಳು ಅಂದನುಡಿ ಕೃಷ್ಣ ಭಟ್ಟರ ಮನವನ್ನು ಕೆದಕಿತು. ವ್ಯಾಪಾರದಲ್ಲಿ ಲಾಭ ಪಡೆಯುವುದಕ್ಕಿಂತ ಬಿಡ್ಡಿಗೂ ನೋಡ್ತಿಗೂ ಹಣಕಟ್ಟಿ ಲಾಭ ಗಳಿಸುವುದುತ್ತಮ. ತನ್ನಂತಹ ಭಾಗ್ಯಶಾಲಿಗೆ ಹಣಸಿಗದಿದ್ದೀತೇ? ಸಿಕ್ಕಿಯೇ ಸಿಕ್ಕುವುದು ಒಂದೇ ಬಾರಿಯಲ್ಲಿ ಹೊನ್ನಿನ ಸುರಿಮಳೆ" ಎಂದು ಕೃಷ್ಣ ಭಟ್ಟರು ಭಾವಿಸಿ ಕನಸಿನ ರಾಜ್ಯದಲ್ಲೋಲಾಡ ತೊಡಗಿದರು. ಕಾಗೆ ಕೂಗಿದರೆ ಆರು. ಕೆಂಪು ಕಂಡರೆ ಏಳು ಸರ್ಪ ಕಂಡರೆ ಎಂಟು ಗಾಡಿ ಮಗುಚಿದರೆ ಹನ್ನೆರಡು ಎಂದು ಮೊದಲಾದ ಬಿಡ್ಡಿನ ಸಂಖ್ಯೆಯರಿಯುವ ತತ್ವಗಳನ್ನು ಅಭ್ಯಸಿಸಿದರು. ಕನಸಿನಲ್ಲಿ

ಕಾಗೆ ಗಾಡಿ ಮೊದಲಾದುವನ್ನು ಕಂಡು ಆಯಾ ಸಂಖ್ಯೆಗಳಿಗೆ ಎಡೆಬಿಡದೆ ಹಣ ಕಟ್ಟತೊಡಗಿದರು. ಹಣವನ್ನು ನೀರಿನಂತೆ ಖರ್ಚು ಮಾಡಲು ತೊಡಗಿದರು. ಒಂದೆರಡು ಬಾರಿ ಒಂದೊಂದು ಸಾವಿರ ರೂಪಾಯಿಗಳೂ ಕೃಷ್ಣ ಭಟ್ಟರಿಗೆ ಬಿಡ್ಡಿನಲ್ಲಿ ಸಿಕ್ಕಿದುವು. ಹಣಸಿಕ್ಕಿದಾಗ ರುಚಿ ಹೆಚ್ಚಿತು. ಕೃಷ್ಣ ಭಟ್ಟರಿಗೆ ಬಿಡ್ಡಿನ ಹುಚ್ಚು ಹಿಡಿಯಿತು.

ಕೃಷ್ಣ ಭಟ್ಟರಿಗೆ ತುಸು ಭಾಗ್ಯೋದಯವಾದಂತೆ ಕಂಡುಬಂತು, ಮತ್ತೊಮ್ಮೆ ಬಿಡ್ಡಿನಲ್ಲೂ ಸೊಡ್ತಿಯಲ್ಲೂ ಒಟ್ಟಾಗಿ ಐದಾರು ಸಾವಿರ ರೂಪಾಯಿಗಳು ಲಭಿಸಿದುವು. ಹಠಾತ್ತಾಗಿ ಅಡಿಕೆ, ಕಾಳು ಮೆಣಸು ಗೇರು ಬೀಜಗಳಿಗೆ ಬೆಲೆ ಏರಿತು. ಹಾಗಾಗಿ ಹಳ್ಳಿಯಿಂದ ತಂದ ಸಾಮಾನುಗಳಲ್ಲೂ ಲಾಭದೊರಕಿತು. ಕೃಷ್ಣ ಭಟ್ಟರ ಮನ ಹಿರಿಹಿಗ್ಗಿತು. ಇನ್ನೇನು ಕೆಲವೇ ಸಮಯದಲ್ಲಿ ತಾನೊಬ್ಬ ಲಕ್ಷಾಧೀಶನಾಗುವೆನೆಂಬ ಕನಸನ್ನು ಕೃಷ್ಣ ಭಟ್ಟರು ಕಾಣತೊಡಗಿದರು. ಅಡಿಕೆ, ಕಾಳು ಮೆಣಸು, ಗೇರು ಬೀಜ ಮೊದಲಾದವುಗಳಿಗೆ ಒಮ್ಮೊಮ್ಮೆ ಒಂದೊಂದು ತೆರನಾದ ಬೆಲೆ. ಅವುಗಳಿಗೆ ತೇಜಿಬರಲಿದೆ. ಇಂತಿಂತಹ ಸಮಯಗಳಲ್ಲಿ ಇಂತಿಂತಹ ಸಾಮಾನುಗಳಿಗೆ ತೇಜಿ, ಇಂತಿಂತಹ ಸಮಯಗಳಲ್ಲಿ ಇಳಿಮುಖ, ಎಂದು ಕೆಲವೊಂದು ಸಮಯಗಳನ್ನು ಮನದಲ್ಲಿ ನಿಶ್ಚೈಸಿ ಸಾಮಾನುಗಳನ್ನು ತೆಗೆಯಲೂ ಮಾರಾಟ ಮಾಡಲೂ ನಿರ್ಧರಿಸಿಕೊಂಡರು. ಎಷ್ಟು ಸಾಧ್ಯವೋ ಅಷ್ಟು ಸಾಮಾನುಗಳನ್ನು ಬೆಲೆ ಕಡಿಮೆಯ ಸಮಯವೆಂದು ನಿರ್ಧರಿಸಿದ ಕಾಲದಲ್ಲಿ ಕೂಡ ಹಾಕಿದರು. ಸಾನನ್ನುನವರಿಗೆ ಈ ಸಾಮಾನುಗಳನ್ನು ವಿಕ್ರಯಿಸುವುದು ಬೇಡ ಎಂದವುಗಳನ್ನು ತಂದು ಬಂಡಸಾಲೆಯಲ್ಲಿ ದಾಸ್ತಾನಿರಿಸಿದರು. ನಿರೀಕ್ಷಿಸಿದ ಬೆಲೆ ಬರಲಿ. ಒಂದೇ ಗಂಟಿಗೆ ಹದಿನಾರು ಸಾವಿರ ರೂಪಾಯಿಗಳನ್ನು ಹೊಡೆಯುವೆ ಎಂದು ಸಾಮಾನುಗಳಿಗೆ ತೇಜಿಬರುವುದನ್ನು ನಿರೀಕ್ಷಿಸ ತೊಡಗಿದರು. ಆದರೆ ಕೃಷ್ಣ ಭಟ್ಟರ ನಿರೀಕ್ಷೆ ಫಲಿಸಲಿಲ್ಲ ಸಾಮಾನುಗಳಿಗೆ ಬೆಲೆ ಇಳಿಯ ತೊಡಗಿತು. ಮತ್ತೂ ಕೆಲಸಮಯ ಕಾದು ಕುಳಿತರು. ಬೆಲೆ ಮತ್ತಷ್ಟೂ ತಗ್ಗಿತು. ನಿರ್ವಾಹವಿಲ್ಲದೆ ದಾಸ್ತಾನಿರಿಸಿದ ಸಾಮಾನುಗಳನ್ನು ಕೃಷ್ಣ ಭಟ್ಟರು ಮಾರಾಟ ಮಾಡಲೊಪ್ಪಿಗೆ ಕೊಟ್ಟರು.

ಅಧಿಕ ಬೆಲೆಕೊಟ್ಟು ತಂದ ಸಾಮಾನುಗಳು ಕಡಿಮೆ ಬೆಲೆಗೆ ಮಾರಲ್ಪಟ್ಟುವು. ಕೃಷ್ಣ ಭಟ್ಟರಿಗೆ ನಷ್ಟಬಂದೊದಗಿತು. ಮಂಗೇಶ ಮಲ್ಯರಿಗೆ ಕೆಲವು ಸಾವಿರ ರೂಪಾಯಿಗಳು ಸಲಬೇಕಾಗಿ ಬಂದುವು. "ಇನ್ನು ಸಾಲ ತೀರಿಸದೆ ಹಣ ಕೊಡಲಾರೆ, ಕೊಟ್ಟ ಹಣ ತುಂಬಿಸಿರಿ, ಆ ಮೇಲೆ ಬೇಕಾದಲ್ಲಿ ಹಣ ಕೊಡುವ" ಎಂದು ಮಂಗೇಶ ಮಲ್ಯರು ಸುರಿದರು. ಮಂಗೇಶ ಮಲ್ಯರು ನನ್ನನ್ನು ಸೋಲಿಸಿ ಬಿಟ್ಟರು. ಸಾಮಾನುಗಳನ್ನು ಬೆಲೆ ಇರುವಾಗ ವಿಕ್ರಯಿಸದೆ ಬೆಲೆ ಇಳಿಮುಖವಾದಾಗ ಮಾರಾಟ ಮಾಡಿ ನನಗೊಂದು ದೊಡ್ಡ ಹೊಂಡ ತೋಡಿ ಇರಿಸಿದರು ಎಂದು ಕೃಷ್ಣ ಭಟ್ಟರನ್ನತೊಡಗಿದರು.

ಆದರೂ ಕೃಷ್ಣ ಭಟ್ಟರು ತಮ್ಮ ದೊಡ್ಡಸ್ತಿಕೆ ಬಿಡಲಿಲ್ಲ. ಹಳ್ಳಿಗೆ ಸಾಗಿದರು. ಊರವರನ್ನು ಬಾಯಿಪಟಾಕಿ ಹಾರಿಸಿ ಮಂಕುಮಾಡಿದರು. ಸಾಮಾನುಗಳನ್ನು ಪಡಕೊಳ್ಳ ತೊಡಗಿದರು. ಕೆಲ ಜನರಿಗೆ ಸ್ವಲ್ಪ ಸ್ವಲ್ಪ ಹಣಕೊಟ್ಟರು. ಕೆಲ ಜನರಿಗೆ ಮಂಗಳೂರಿಗೆ ಹೋಗಿ ಬಂದೀಯುವೆನೆಂದರು. ನಂಬಿದ ಹಲವಾರು ಜನರು ಕೃಷ್ಣ ಭಟ್ಟರಿಗೆ ಅತ್ಯಧಿಕ ಬೆಲೆಗೆ ಸಾಮಾನುಗಳನ್ನು ವಿಕ್ರಯಿಸಿದರು. ಪಡೆದ ಸಾಮಾನುಗಳನ್ನು ಕೃಷ್ಣ ಭಟ್ಟರು ಮಂಗೇಶ ಮಲ್ಯರಲ್ಲಿಗೆ ಸಾಗಿಸಿದರು. ಕೈಯಲ್ಲಿ ಸ್ವಲ್ಪ ಹಣ ರೊಕ್ಕ ಮಾಡಿಕೊಂಡರು. ಸಾಮಾನು ಸಾಲ ಕೊಟ್ಟವರಿಗೆ ಮುಖತೋರಿಸದೆ ಪೇಟೆಯಲ್ಲುಳಿದರು. ಇನ್ನೊಮ್ಮೆ ಬಿಡ್ದು ನೊತ್ತಿಗಳಲ್ಲಿ ಹಣಪಡೆದು ಕಾರ್ಯಭಾರ ಮುಂದಕ್ಕೆ ಸಾಗಿಸುವೆನೆಂದು ನಿರ್ಧರಿಸಿ ಅವುಗಳಿಗೆ ಹಣಸುರಿಯ ತೊಡಗಿದರು. ನಷ್ಟಬಂದು ಮನಕ್ಕೊದಗಿದ ದುಗುಡ ಪರಿಹರಿಸಲಾಗಿ ಮಾದಕ ಪದಾರ್ಥಗಳನ್ನು ಸೇವಿಸತೊಡಗಿದರು. ಎಂದಿನಂತೆ ವಿನೋದ ವಿಹಾರಗಳನ್ನು ಎಳ್ಳಷ್ಟೂ ಕಡಿಮೆ ಮಾಡದೆಸಗತೊಡಗಿದರು. ಹೀಗೆ ಬರಿಗೈಯಲ್ಲಿ ಮೊಳಹಾಕುತ್ತಾ ದರ್ಬಾರು ನಡೆಸುತ್ತಿರುವಾಗ ಕೃಷ್ಣ ಭಟ್ಟರ ಕೈಯಲ್ಲಿದ್ದ ಅಲ್ಪ ಸ್ವಲ್ಪ ಹಣವೂ ಮಂಜಿನಂತೆ ಕರಗಿ ನೀರಾಗ ತೊಡಗಿತು. ಹಣ ಮುಗಿಯುವಾಗ ಇನ್ನು ಮೇಲೆ ಮೊದಲಿನಂತೆ ರೀತಿಯಲ್ಲಿರುವುದು ಅಸಾಧ್ಯವೆಂದು ಕೃಷ್ಣ ಭಟ್ಟರಿಗನ್ನಿಸಿತು. ತನ್ನ ಯೋಚನೆಗಳೆಲ್ಲಾ ಬರಿಯಬಯಲ

ಭ್ರಾಂತಿಯಾದುವಲ್ಲ ಪಾಲಿನಲ್ಲಿ ಸಿಕ್ಕಿದ ಹಣ, ತಮ್ಮಂದಿರನ್ನು ಸೋಲಿಸಿ ಸಂಗ್ರಹಿಸಿದ ಹಣ, ಸಾಮಾನುಗಳಲ್ಲಿ ಲಾಭ ಸಿಕ್ಕಿದ ಹಣ, ಬಿಡ್ಡು ಸೊಡ್ತಿಗಳಲ್ಲಿ ಸಿಕ್ಕಿದ ಹಣ, ಎಲ್ಲಾ ಒಟ್ಟು ಸೇರಿದರೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಾಗದು. ಈ ಸಹಸ್ರಾರು ರೂಪಾಯಿಗಳು ಹೇಗೆ ಮುಗಿದುವಪ್ಪಾ! ಆ ಸಹಸ್ರಾರು ರೂಪಾಯಿಗಳು ಮುಗಿದು ನಿರ್ನಾಮವಾದುದಲ್ಲದೆ ಇನ್ನೂ ನಾಲ್ಕೈದು ಸಾವಿರ ರೂಪಾಯಿಗಳು ಕೊಡುವುದಿದ್ದರೆ ಹಳ್ಳಿಯವರಿಗೂ ನನ್ನಿಂದ ಸಾಲ ಸಲಬೇಕು. ಸಾಮಾನು ತಂದು ಹಳ್ಳಿಗರಿಗೆ ಇದುತನಕ ಅದರ ಹಣ ಕೊಟ್ಟಿಲ್ಲ. ಅಯ್ಯೊ! ಕೆಡುಗಾಲ ಬಂತಲ್ಲ. ನನಗೇನೊ ಗ್ರಹಚಾರ ಹಿಡಿದಿದೆ. ಹೋದಲ್ಲಿ ಬಂದಲ್ಲಿ ಮುಟ್ಟಿದುದೆಲ್ಲಾ ಮಸಿಯಾಗುತ್ತಿದೆ ವ್ಯಾಪಾರ ನಮಗಂದ ವೃತ್ತಿಯಲ್ಲ. ಅದು ನಮ್ಮಿಂದ ಪೂರೈಸುವ ಉದ್ಯೋಗವಲ್ಲ ಎಂದು ನನ್ನ ಬಂಧುಬಳಗದವರನ್ನುವಾಗ ಆಗ ಅದು ನನ್ನ ಕಿವಿಗೆ ಹೋಗಲಿಲ್ಲ. ಇಚ್ಛೆ ಬಂದಂತೆ ರಾಜ ಕುಮಾರನಂತೆ ರೀವಿಯಲ್ಲಿ ವಿನೋದ ವಿಹಾರ ವೆಸಗಿದೆ. ಬಿಡ್ಡು ಸೊಡ್ತಿಗಳಿಗೆ ಇದ್ದ ಹಣವನ್ನೆಲ್ಲಾ ಸುರಿದೆ. ಈಗ ಕೈಯಲ್ಲಿ ಕುರುಡು ಕಾಸಿಲ್ಲ. ಈ ಊರಲ್ಲಿ ನಿಂತರೆ ಸಾಲಗಾರರ ಉಪಟಳ ಸಹಿಸುವಂತಿಲ್ಲ. ದರ್ಬಾರಿನಿಂದ ಇನ್ನು ಮೇಲೆ ಜೀವನ ಸಾಗಿಸುವುದು ಅಸಾಧ್ಯ. ಪರಿಚಿತರೆದುರು ಸಾಮಾನ್ಯ ವೃತ್ತಿಯಿಂದಿನ್ನು ಮೇಲೆ ಜೀವಿಸುವುದೆಂದರೆ ಅದಕ್ಕಿಂತ ದೊಡ್ಡದಾದ ನಾಚಿಕೆಗೇಡು ಇನ್ನೊಂದು ಇಲ್ಲ. ಇನ್ನೇನು ಮಾಡಲಿ. ಕೆಟ್ಟ ಮೇಲೆ ಬುದ್ಧಿ ಬಂತು. ಏನೂ ಆಗಲಿ ಇನ್ನಿಲ್ಲಿ ನಿಲಲಾರೆ, ತಲೆಮರಸಿಕೊಳ್ಳುವೆ, ದೂರಸಾಗಿ ನಿರಾಡಂಬರವಾಗಿ, ಕಲಿತ ದುರ್ವ್ಯಸನಗಳನ್ನೆಲ್ಲಾ ಮರೆತು ಯೋಗ್ಯನಾಗಿ ಬಾಳುವೆ. ಎಲ್ಲಾದರೂ ಹೋಗುವೆ ಎಂದು ಯೋಚಿಸಿ ಕೊಂಡರು. ಯಾರೂ ಅರಿಯದಂತೆ ಒಮ್ಮಿಂದೊಮ್ಮೆಯೇ ಕೃಷ್ಣ ಭಟ್ಟರು ಮಾಯವಾದರು.

ಕೃಷ್ಣ ಭಟ್ಟರು ಮಾಯವಾದ ಸುದ್ದಿ ಮೆಲ್ಲಮೆಲ್ಲನೆ ಹಬ್ಬಿತು. ಅವರಿಂದ ಹಣಬರಬೇಕಾದವರಿಗೆ ಇದು ತಿಳಿದಾಗ ಭರಸಿಡಿಲು ಬಂದೆರಗಿದಂತಾಯಿತು. ಆಡಂಬರ ನೋಡಿ ಜನರನ್ನಳೆಯುವುದು ತಿಳಿಗೇಡಿತನ. ನಮ್ಮ ಅವಿವೇಕದಿಂದಾಗಿ ಹಗಲಿರುಳೆನ್ನದೆ ದುಡಿದ ಸೊತ್ತು ಕೃಷ್ಣ

ಭಟ್ಟರಿಗೆ ದಕ್ಕಿತು. ಹಾಗೆ ಮೋಸಮಾಡಿ ಅವರಾದರೂ ಒಳ್ಳೆಯ ದಾದರೇ? ಇಲ್ಲ. ಎಲ್ಲರನ್ನೂ ಮೋಸಪಡಿಸಿ ತಾವೂ ನಿರ್ಗತಿಕರಾಗಿ ಒಮ್ಮಿಂದೊಮ್ಮೆಯೇ ಪರಾರಿಯಾದರು. ಅವರೆಲ್ಲಿ ಹೋದರೂ ಏಳಿಗೆ ಬರಲಿಕ್ಕಿಲ್ಲ. ಅವರು ಹಿಡಿದ ಕೆಲಸ ಒಂದೂ ಸಾಧಿಸದೆ ಹೋಗಲಿ. ಕೃಷ್ಣ ಭಟ್ಟರು ಕುಂಭೀಪಾಕನರಕಕ್ಕೆ ಹೋಗಿ ಬೀಳಲಿ. ಬಹುಕಾಲ ನರಳಿ ಹಾಳಾಗಿ ಹೋಗಲಿ ಎಂದು ಶಪಿಸಿದರು. ಹಣವೂ ಇಲ್ಲ ಸಾಮಾನು ಇಲ್ಲ. ತಲೆಗೆ ಬೋಳೆಣ್ಣೆ ಗತಿ. ಎಂದೆನ್ನುತ್ತಾ ದುಃಖಿಸಿದರು.

## ಸುಳಿ ೧೦.

ಮಡಿಕೇರಿ ಮಲೆನಾಡು. ಮಲೆನಾಡಿನಲ್ಲಿ ಜ್ವರ ಬರುತ್ತಿದೆಯೆಂದು ನಮ್ಮೂರ ಜನರು ಅಲ್ಲಿಗೆ ಹೋಗುವುದು ಬಹು ಕಡಿಮೆ. ಅಲ್ಲಿ ದೊಡ್ಡದೊಡ್ಡ ಶ್ರೀಮಂತರಿರುವರೆಂದು ಕೇಳಿಬಲ್ಲೆ. ಅಲ್ಲಿ ಹೋಗಿ ಏನಾದರೊಂದು ಉದ್ಯೋಗ ಸಂಪಾದಿಸುವೆನು. ದುರ್ವ್ಯಸನಗಳನ್ನೆಲ್ಲಾ ಎತ್ತಿಕ್ಕಿ ಸಾಮಾನ್ಯ ಜನರು ಜೀವಿಸುವಂತೆ ಜೀವಿಸುವೆ. ಆದರೆ ಮಡಿಕೇರಿಗೆ ಹೋಗಿ ಯಾವ ಕೆಲಸ ಹಿಡಿಯಲಿ? ಸ್ವತಂತ್ರವಾಗಿ ಮನಬಂದಂತೆ ತಿರುಗಾಡಿ ಜೀವನವ್ನು ಕಳೆದವನು ನಾನು. ಪರರ ಹಂಗೆಂಬುದನ್ನು ಅರಿಯದವನು ನಾನು ಮೈಮುರಿದು ದುಡಿಯಲರಿಯದವನು. ಕುಶಲ ವಿದ್ಯೆಗಳೊಂದೂ ತಿಳಿಯದು. ಯಾವ ಕೆಲಸ ಹಿಡಿಯಲಿ? ಏನು ಮಾಡಲಿ? ಎಂದೆನುವ ಚಿಂತೆ ಮಡಿಕೇರಿಗೆ ಬಸ್ಸು ಪ್ರಯಾಣ ಮಾಡುತ್ತಿರುವ ಕೃಷ್ಣ ಭಟ್ಟರ ತಲೆಯಲ್ಲಿ ಸುತ್ತುತಿತ್ತು. ಯೋಚನೆ ಗಂಭೀರವಾಗಿ ತಲೆಯನ್ನು ಕೆಡಿಸುತ್ತಿತ್ತು. ಆಗಲಿ ಶ್ರೀಮಂತರನ್ನು ಆಶ್ರಯಿಸಿ ಲೆಕ್ಕ ಪತ್ರ ಬರೆಯುವ ಕೆಲಸ ಮಾಡುವೆ. ಅದು ಸಿಕ್ಕಿದರೊಳ್ಳೆಯದಾಗಿತ್ತು, ಹುಡುಕಾಡಿ ನೋಡುವೆ ಎಂದೆಣಿಸಿಕೊಂಡರು.

ಚಿಂತೆಯ ಕಡಲಲ್ಲಿ ಮುಳುಗಿದ ಕೃಷ್ಣ ಭಟ್ಟರು ಬಸ್ಸಿನಲ್ಲಿ ಮಡಿಕೇರಿಗೆ ಸಾಗುತ್ತಿದ್ದರು. ದಾರಿಯುದ್ದಕ್ಕೂ ಪ್ರಯಾಣ ವೆಸಗು

ತ್ತಿರುವ ಕೃಷ್ಣ ಭಟ್ಟರು ಚಿಂತೆಯೋಚನೆಗಳಲ್ಲಿ ತಲ್ಲೀನರಾಗಿದ್ದರು. ಪ್ರಕೃತಿಯ ರಮ್ಯನೋಟವಾಗಲಿ ಬಳಿಯಲ್ಲಿ ಕುಳಿತವರ ಸರಸ ಸಂಭಾಷಣೆಗಳಾಗಲಿ, ಇನ್ನೊಂದಾಗಲಿ ಕೃಷ್ಣ ಭಟ್ಟರಿಗೆ ಹಿಡಿಸುತ್ತಿರಲಿಲ್ಲ. ಗುಡ್ಡಗಳ ನಡುವೆ ಸುತ್ತಿಸುತ್ತಿ ಮೇಲೇರಿ ಏರುತಗ್ಗುಗಳಲ್ಲಿ ಹಾರಾಡಿ ಪಯಣಿಗರನ್ನು ಸಾಕೋಸಾಕು ಮಾಡುವ ಬಿಡುವಿಲ್ಲದ ಬಸ್ಸಿನ ಪ್ರಯಾಣ ಕೃಷ್ಣ ಭಟ್ಟರನ್ನು ಮತ್ತಷ್ಟು ಬಳಲಿ ಬೆಂಡಾಗಿಸಿತು. ಬಸ್ಸು ನಿಂತಿತು. ಬಸ್ಸು ಮುಡಿಕೇರಿಗೆ ತಲಪಿತು.

ಹೊಸ ಊರು, ಪರಿಚಯದ ಜನರಿಲ್ಲ. ಎಲ್ಲಿ ಹೋಗಲಿ, ಯಾರೊಡನೆ ಮಾತನಾಡಲಿ, ಎಲ್ಲಿ ಕೆಲಸಕ್ಕೆ ಸೇರಲಿ, ಎಂದು ಬಸ್ಸಿನಿಂದಿಳಿದ ಕೃಷ್ಣ ಭಟ್ಟರು ಕ್ಷಣಕಾಲ ದಿಙ್ಮೂಢರಾದರು. 'ಬಾಯಿಯಿದ್ದವರೆ ಮಗ ಬದುಕಿಯಾನು' ಎಂದು ನಾಣ್ನುಡಿಯಿದೆಯಷ್ಟೆ. ಉಪಹಾರ ಮಂದಿರದೆಡೆಸಾಗಿ ತುಸು ಉಪಹಾರತಕ್ಕೊಂಡು ಕೃಷ್ಣ ಭಟ್ಟರು ಅಲ್ಲಿ ಇಲ್ಲಿ ವಿಚಾರಿಸ ತೊಡಗಿದರು ಕಂಡಕಂಡವರ ಕೈಕಾಲು ಹಿಡಿದರು. ಎಷ್ಟೆಷ್ಟು ಲಾಗ ಹಾಕಿದರೂ ಏಸೆಸಗಿದರೂ ಕೆಲವು ದಿನಗಳವರೆಗೆ ಏನೊಂದೂ ಕೆಲಸ ದೊರಕದಾಯಿತು. ಅಲ್ಲಿ ಇಲ್ಲಿ ಅಲೆದಾಡಿ ಶ್ರಮ ಪಟ್ಟುದೊಂದೇ ಅವರಿಗೆದಕ್ಕಿತು. ಎಲ್ಲಿಯೂ ಯೋಚನೆ ಮಾಡಿದ ರೀತಿಯ ಕೆಲಸ ಸಿಗದಾಯಿತು. ಕಟ್ಟಕಡೆಗೆ ಆಸೆಯ ಕುಡಿ ಮುರುಟಿತೆಂದೆನುವಾಗ ಬೆಳ್ಯಪ್ಪನವರಿಗೊಬ್ಬ ಕಾರಕೂನನು ಬೇಕಾಗಿರುವರೆಂದೆನುವ ಸುದ್ದಿ ಸಿಕ್ಕಿತು ಕೃಷ್ಣ ಭಟ್ಟರು ಬೆಳ್ಯಪ್ಪನವರಲ್ಲಿಗೆ ಮಾತನಾಡಿ ಉದ್ಯೋಗ ದೊರಕಿಸಿಕೊಳ್ಳಲು ತೆರಳಿದರು.

ಬೆಳ್ಯಪ್ಪನವರು ದೊಡ್ಡ ಜಮೀನ್ದಾರರು. ಹಲವಾರು ಕಡೆ ಏಲಕ್ಕಿ ಮಲೆಗಳೂ ಕಾಫಿ ತೋಟಗಳೂ ಅವರಿಗಿದ್ದುವು. ಅವರ ಮನೆ ದೊಡ್ಡ ಅರಮನೆಯಂತಿತ್ತು. ವೈಭವಪೂರಿತವಾದ ಅವರ ಬಂಗಲೆ ಅಚ್ಚುಕಟ್ಟಾಗಿ ಬಹು ಮನೋಹರವಾಗಿ ಕಂಗೊಳಿಸುತ್ತಿತ್ತು. ಅವರ ಕೈಕೆಳಗೆ ಹಲವಾರು ಜನರು ದುಡಿಯುತ್ತಿದ್ದರು. ಸರಕಾರಿ ಇಲಾಖೆಯಂತೆ ಅವರಲ್ಲೂ ಹಲವಾರು ಖಾತೆಗಳಿದ್ದು ಪ್ರತಿಯೊಂದೂ ಸುವ್ಯವ

ಸ್ಥಿತ ರೂಪವನ್ನು ತಾಳಿದ್ದವು. ಬೆಳ್ಯಪ್ಪನವರು ತುಂಬಾ ಸ್ಟ್ರಿಕ್ಟ್ ಮರ್ಜಿಯವರು. ಕೈಗೊಂದು ಕಾಲಿಗೊಂದೆಂಬಂತೆ ಹಲವಾರು ಜನರವರನ್ನು ಉಪಚರಿಸುತ್ತಿದ್ದರು. ಗಂಭೀರ ಪ್ರಕೃತಿಯವರೂ ಅಚ್ಚುಕಟ್ಟಿನ ಮರ್ಜಿಯವರೂ ಆದ ಬೆಳ್ಯಪ್ಪನವರೊಡನೆ ಮಾತನಾಡಲು ಸಾಮಾನ್ಯ ಜನರಿಗೆ ನೋಡಿದಾಗಲೇ ನಾಲಿಗೆ ಹೊರಬೀಳಲಾರದು. ವಿಶ್ವಾಸಸ್ಥರನ್ನು ಕಡೆತನಕ ಬಿಟ್ಟುಹಾಕಲಾರದವರೆಂದೂ, ಮರೆಮೋಸ ವಂಚನೆಗಳು ಕಡು ವೈರಿಯೆಂದೂ ಅವರು ಹೆಸರು ಗಳಿಸಿದ್ದರು. ದುರ್ನಡತೆ ತಿಳಿದುಬಂದರೆ ಅವರು ಕೊಡುವ ದಂಡನೆ ಬಹು ಕಠಿಣ. ಅಪರಾಧಿಗಳಿಗೆ ಮೈ ಚರ್ಮ ಸುಲಿದು ಹೋಗುವಂತೆ ದಂಡನೆಯೀಯುತ್ತಿದ್ದರು. ಆದುದರಿಂದಲೇ ಅಪರಾಧಿಗಳಿಗೀಯುವ ಕ್ರೂರ ದಂಡನೆಯನ್ನು ನೋಡಿ ಜನರು ಅವರನ್ನು ಹುಲಿಯೆಂದು ತಿಳಿಯುತ್ತಿದ್ದರು. ಆ ರೀತಿಯವರಾದ ಬೆಳ್ಯಪ್ಪನವರಲ್ಲಿ ಲೆಕ್ಕಪತ್ರಗಳನ್ನು ಸರಿಯಾಗಿ ಇಡುವ ವಿಭಾಗದಲ್ಲಿ ಒಬ್ಬ ಕಾರಕೂನನ ಆವಶ್ಯಕತೆ ಇತ್ತು. ಕೃಷ್ಣ ಭಟ್ಟರು ವಿನಯಪೂರ್ವಕ ಮಾತನಾಡಿ ಕಾರಕೂನ ಕೆಲಸ ದೊರಕಿಸಿಕೊಂಡರು. "ಪ್ರಾಮಾಣಿಕತನದಿಂದ ದುಡಿದರೆ ಉನ್ನತಿ ಇದೆ" ಎಂದು ಬೆಳ್ಯಪ್ಪನವರು ಕೃಷ್ಣ ಭಟ್ಟರಿಗರುಹಿದರು. ಮಾಡತಕ್ಕ ಕೆಲಸಗಳನ್ನು ವಿವರಿಸಿದರು. ಯೋಗ್ಯ ವಸತಿಯೇ ಮೊದಲಾದ ಸೌಕರ್ಯಗಳನ್ನು ನೀಡಿದರು.

ಕೃಷ್ಣ ಭಟ್ಟರು ತನ್ನ ಶೇಷ ಜೀವನವನ್ನು ಪ್ರಾಮಾಣಿಕತೆಯಿಂದ ನಡೆಯಿಸುವೆನೆಂದು ಪಣ ತೊಟ್ಟಿದ್ದರು. ಹಾಗಾಗಿ ವಿಶ್ವಸ್ತರಾಗಿ ತನ್ನ ಪಾಲಿಗೊಪ್ಪಿಸಿದ ಕಾಫಿ ತೋಟ ಏಲಕ್ಕಿ ಮಲೆಗಳಲ್ಲೊಮ್ಮೊಮ್ಮೆ ಸಂಚರಿಸತೊಡಗಿದರು. ಕೂಲಿಗಾರರ ಮೇಲ್ವಿಚಾರಣೆ ನೋಡತೊಡಗಿದರು. ಸರಿಯಾದ ಲೆಕ್ಕಪತ್ರ ಇಡ ತೊಡಗಿದರು. ಕೂಲಿಗಾರರ ಮಧ್ಯಕ್ಕೆ ಒಮ್ಮೊಮ್ಮೆ ಕೃಷ್ಣ ಭಟ್ಟರು ಹೋದಾಗ ಅವರು ಮದ್ಯ ಸೇವಿಸುವುದನ್ನೂ ಹಾಳುಹರಟೆ ಹೊಡೆಯುವುದನ್ನೂ ಕಣ್ಣಾರೆ ಕಾಣುತ್ತಿದ್ದರು. ಆಗ ಕೃಷ್ಣ ಭಟ್ಟರಿಗೆ ಮನ ಹುಚ್ಚುಹಿಡಿದಂತಾಗುತ್ತಿತ್ತು. ಅಯ್ಯೋ! ಪಾಪ! ಹೊಟ್ಟೆಹೊರೆಯಲಸದಳವಾಗಿ ಇವರೂ

ನನ್ನಂತೆ ಈ ಊರಿಗೆ ಬಂದು ಕಷ್ಟಪಡುತ್ತಿರುವರಲ್ಲ. ಹಿಂದೆ ಬೇಸರ ನೀಗಲೆಂದು ನಾನು ಬ್ರಾಂಡಿ ಸೇವಿಸಿದಂತೆ ಇವರು ಮದ್ಯ ಸೇವಿಸುತ್ತಿರುವರಲ್ಲಾ, ಹಾಳುಹರಟೆ ಹೊಡೆಯುತ್ತಿರುವರಲ್ಲಾ, ನನಗೂ ಇವರಿಗೂ ಇರುವ ಅಂತರವೇನು? ನಿಜವಾಗಿಯೂ ಅಕ್ಷಮ್ಯವಾಪರಾಧ ವೆಸಗಿದ ನಾನು ಇವರೆಡೆಯಲ್ಲಿ ಇವರಿಗಿಂತಲೂ ಹೀನಸ್ಥಿತಿಯಲ್ಲಿರಬೇಕಾಗಿತ್ತು" ಎಂದು ಮನನೊಂದುಕೊಳ್ಳುತ್ತಿದ್ದರು. ತಾನೊಬ್ಬ ಅವರ ಮೇಲಧಿಕಾರಿಯೆಂದು ಬಗೆದು ಅವರನ್ನು ಗದರಿಸದೆ ಸೋದರ ಪ್ರೇಮದಲ್ಲಿ ಮಾತನಾಡುತ್ತಿದ್ದರು. "ಅಣ್ಣಗಳಿರಾ! ಇಂತೆಸಗಬಾರದು, ಮದ್ಯವನ್ನು ಸೇವಿಸಬಾರದು. ಅದರಲ್ಲಿ ಕೆಡುಕಿದೆ." ಎಂದು ವಿವರಿಸಿ ತಿಳಿಸುತ್ತಿದ್ದರು. ಎಚ್ಚರಿಕೆಯಿತ್ತು ಕೂಲಿಗಾರರಿಗೆ ಅವರ ಹೊಣೆಯನ್ನು ತಿಳಿಸುತ್ತಿದ್ದರು. ಕೂಲಿಗಾರರೂ ಇವರ ಪ್ರೇಮ ಮತ್ತು ಹಿತದ ನುಡಿಗಳಿಗೆ ತಲೆಬಗ್ಗಿಸಿ ಇವರಂದಂತೆ ನಡಕೊಳ್ಳುತ್ತಿದ್ದರು. ಅಂತೂ ಕಾರಕೂನರಾಗಿ ಸೇರಿದ ಕೃಷ್ಣ ಭಟ್ಟರು ಯೋಗ್ಯರಾಗಿ ಬಾಳತೊಡಗಿದರು.

ಕೃಷ್ಣ ಭಟ್ಟರಂತೆಯೇ ಬೆಳ್ಯಪ್ಪನವರಿಗೆ ಲೆಕ್ಕ ಪತ್ರಗಳನ್ನಿಡಲು ಇನ್ನಿಬ್ಬರು ಕಾರಕೂನರೂ ಇದ್ದರು. ಈ ಮೂವರಿಗೆ ಮೇಲಧಿಕಾರಿಗಳಾಗಿ ಕಾರ್ಯಪ್ಪನವರೆಂಬೊಬ್ಬರು ಇದ್ದರು. ಮೇಲಧಿಕಾರಿಗಳಾದ ಕಾರ್ಯಪ್ಪನವರ ಕೈಕೆಳಗೆ ಈ ಮೂವರೂ ದುಡಿಯಬೇಕಾಗಿತ್ತು. ಕಾರ್ಯಪ್ಪನವರು ಇವರೆಲ್ಲರ ಮೇಲೂ ಅಧಿಕಾರ ಚಲಾಯಿಸಿ ಹಾಗೆ ಮಾಡಬೇಕು, ಹೀಗೆ ಮಾಡಬೇಕು ಎಂದೆನ್ನುತ್ತಿದ್ದರು. ಮುಖ್ಯ ಕಾರಕೂನರಾದ ಕಾರ್ಯಪ್ಪನವರು ಕಾರ್ಯದಲ್ಲಿ ಬಹು ಜಾಣರು. ತನ್ನ ಕೆಲಸಗಳನ್ನು ಬಾಕಿಯವರ ತಲೆ ಮೇಲೆ ಹೇರಿ ತಾವು ತಮ್ಮಷ್ಟಕ್ಕೆ ಸುಮ್ಮಗಿರುತ್ತಿದ್ದರು. ಲೆಕ್ಕ ಪತ್ರಗಳಲ್ಲಿ ಮರೆಮೋಸಗಳನ್ನೆಸಗಿ ಬೆಳ್ಯಪ್ಪನವರರಿಯದಂತೆ ದುಡ್ಡುಗಳಿಸುತ್ತಿದ್ದರು. ಕಾರ್ಯಪ್ಪನವರು ಹತ್ತಿರದ ಸಂಬಂಧಿಕರಾದುದರಿಂದ ಬೆಳ್ಯಪ್ಪನವರಿಗೆ ಕಾರ್ಯಪ್ಪನವರ ಮೇಲೆ ಎಳ್ಳಷ್ಟೂ ಸಂಶಯವಿರುತ್ತಿರಲಿಲ್ಲ. ಯಾರೊಬ್ಬರೂ ಕಾರ್ಯಪ್ಪನವರ ವಂಚನೆಯನ್ನು ಬಯಲಿಗೆಳೆಯುತ್ತಿರಲಿಲ್ಲ. ನಿಜವಾಗಿಯೂ ಯಜ

ಮಾನರು ಬೆಳ್ಯಪ್ಪನವರಾದರೂ ಯಜಮಾನಿಕೆಯ ರೀವಿ ಕಾರ್ಯಪ್ಪ ನವರದಾಗಿತ್ತು. ಬೆಳ್ಯಪ್ಪನವರ ಆಸ್ತಿಪಾಸ್ತಿ ಸಂಪೂರ್ಣ ತನ್ನದೆಂಬ ಭಾವ ಅವರಲ್ಲಿತ್ತು. ಹೀಗಿರುವ ಕಾರ್ಯಪ್ಪನವರ ವಕ್ರದೃಷ್ಟಿ ಕ್ರಮೇಣ ಕೃಷ್ಣ ಭಟ್ಟರ ಮೇಲೆ ಬಿತ್ತು. ಒಮ್ಮೆ ಕಾರ್ಯಪ್ಪನವರು ಕೃಷ್ಣ ಭಟ್ಟರನ್ನು ಸಂಧಿಸಿ "ಲೆಕ್ಕ ಪತ್ರಗಳನ್ನು ತನಗನುಕೂಲವಾಗಿ ಬರೆಯ ಬೇಕು; ಆದಾಯ ಸಿಗುವಂತೆ ವಂಚನೆ ಯೆಸಗಬೇಕು" ಎಂದು ಹೇಳಿ ದರು. ಆದರೆ ಕೃಷ್ಣ ಭಟ್ಟರವರಂದುದಕ್ಕೊಪ್ಪಲಿಲ್ಲ. "ಇದೊಂದು ಕೆಲಸ ನನ್ನಿಂದಾಗದು. ಬಾಕಿ ಯಾವ ಕೆಲಸ ಹೇಳಿದರೂ ಮಾಡು ವೆನೆ"ಂದು ಸ್ಪಷ್ಟ ತಿಳುಹಿದರು. ಕೃಷ್ಣ ಭಟ್ಟರು ತಾನಂದಂತೆ ವರ್ತಿಸ ಲೊಪ್ಪದುದರಿಂದ ಕಾರ್ಯಪ್ಪನವರು ಒಳಗೊಳಗೆ ರೇಗಿದರು. "ಇವ ರೊಬ್ಬರು ಬಹು ಪ್ರಾಮಾಣಿಕತನ ತೋರಿಸುತ್ತಾ ತನಗಡ್ಡ ಕಾಲಿರಿಸು ತ್ತಿರುವರು. ನನ್ನ ಮಾತು ಮೀರಿದುದಕ್ಕೆ ತಕ್ಕ ಶಾಸ್ತಿಮಾಡುವೆ. ಅರಿಯದಂತೆ ಉಪಾಯದಿಂದ ಹೊರದೂಡುವೆನು. ಗೌಜಿಮಾಡಿದರೆ ಕೆಲಸ ಕೆಡುವುದು ಎಂದು ಕಾರ್ಯಪ್ಪನವರು ಮನದಲ್ಲಿ ಬಗೆದರು. "ಹೊಸಬರೆಂತಿರುವರೆಂಬುದನ್ನು ಪರೀಕ್ಷಿಸಲು ನಿಮ್ಮೊಡನೆ ಹೀಗಂದು ದಲ್ಲದೆ ಅದು ಯಥಾರ್ಥವಲ್ಲ. ಬಂದ ಜನರೆಲ್ಲಾ ಮೋಸಗಾರರಾದು ದರಿಂದ ಕೆಲಸ ಬಿಟ್ಟೋಡಿದರು. ನೀವು ನಿಮ್ಮ ಕೆಲಸ ಸರಿಯಾಗಿ ನಿರ್ವಹಿಸಿರಿ. ಸಿಕ್ಕಿದರೆ ಸಿಕ್ಕಬೇಕು, ನಿಮ್ಮಂತಹ ಜನರು" ಎಂದು ತೋರಿಕೆಯ ಮಟ್ಟಿಗೆ ಅಂದದ ಎರಡು ನುಡಿ ನುಡಿದು ಕೃಷ್ಣ ಭಟ್ಟರ ಬೆನ್ನು ಚಪ್ಪರಿಸಿದರು. ಕೃಷ್ಣ ಭಟ್ಟರು ಬದುಕಿದೆನೆಂದು ಮನದಲ್ಲಂದು ಕೊಂಡು ಎಂದಿನಂತೆ ಕಾರ್ಯಕ್ಕೆ ಪ್ರವೃತ್ತರಾದರು. ಈ ಘಟನೆ ಕಳೆದ ನಂತರ ಮುಖ್ಯಾಧಿಕಾರಿಗಳಾದ ಕಾರ್ಯಪ್ಪನವರು ಕೃಷ್ಣ ಭಟ್ಟರು ಎಲ್ಲಿ ಸಿಕ್ಕಿ ಬೀಳುತ್ತಾರೆಂಬುದನ್ನು ಕಣ್ಣಿಟ್ಟು ನೋಡತೊಡಗಿದರು.

ಏಲಕ್ಕಿ ಮಲೆಗಳಲ್ಲೂ ಕಾಫಿ ತೋಟಗಳಲ್ಲೂ ದುಡಿಯಲು ಮಡಿಕೇರಿಯಲ್ಲಿ ಜನರಿಲ್ಲ. ಮಲೆನಾಡಾದುದರಿಂದು ಜನಸಂದಣಿ ಕಡಿಮೆ. ದುಡಿಯುವ ಕೂಲಿಯಾಳುಗಳೂ ಕಡಿಮೆ. ಹಾಗಾಗಿ ಅಲ್ಲಿನ ಜಮೀನ್ದಾರರು ದುಡಿಯುವ ಕೂಲಿಯಾಳುಗಳಿಗಾಗಿ ಘಟ್ಟದ ಕೆಳಗಿನ

ಜನರನ್ನು ಆಶ್ರಯಿಸಬೇಕಾಗಿತ್ತು. ಕೂಲಿಯಾಳುಗಳನ್ನು ಒದಗಿಸಿ ಕೊಡುವ ದಲಾಲಿಗಳಿಗೆ ಧಾರಾಳ ಹಣ ಕೊಡುತ್ತಿದ್ದರು. ಬೆಳ್ಳಿಯಪ್ಪ ನವರ ದಲಾಲಿಗಳಲ್ಲಿ ಸುಬ್ಬಣ್ಣ ಶೆಟ್ಟರು ಒಬ್ಬರು. ಆಗಾಗ ಪಡು ಕರಾವಳಿಯಿಂದ ಜನರನ್ನು ಸಂಗ್ರಹಿಸಿ ಬೆಳ್ಳಿಯಪ್ಪನವರಲ್ಲಿಗೆ ಕರೆದುಕೊಂಡು ಬರುವುದೇ ಸುಬ್ಬಣ್ಣ ಶೆಟ್ಟರ ಉದ್ಯೋಗ. ಸುಬ್ಬಣ್ಣ ಶೆಟ್ಟರು ಕೃಷ್ಣ ಭಟ್ಟರ ನೆರೆಯೂರಿನವರು. ಕೃಷ್ಣ ಭಟ್ಟರು ಬೆಳ್ಳಿಯಪ್ಪನವರನ್ನಾಶ್ರಯಿಸಿದ ನಂತರ ಒಂದೆರಡು ತಿಂಗಳುಗಳು ಆಗುವುದರೊಳಗೆ ದಲಾಲಿ ಸುಬ್ಬಣ್ಣ ಶೆಟ್ಟರು ಬೆಳ್ಳಿಯಪ್ಪನವರಲ್ಲಿಗೆ ಬಂದರು. ಬಂದು ಬೆಳ್ಳಿಯಪ್ಪನವರೊಡನೆಯೂ ಕಾರ್ಯಪ್ಪನವರೊಡನೆಯೂ ಮಾತುಕತೆಯೆಸಗಿ ಹಣ ಪಡೆದರು. ಅಷ್ಟ ರಲ್ಲಿ ಏನೋ ಒಂದು ಸಂಗತಿಯನ್ನು ತಿಳಿಸಲಾಗಿ ಕೃಷ್ಣ ಭಟ್ಟರು ಇವರಿರುವಲ್ಲಿಗೆ ಬಂದರು. ಸುಬ್ಬಣ್ಣ ಶೆಟ್ಟರಿಗೆ ಕೃಷ್ಣ ಭಟ್ಟರನ್ನು ಕಂಡಾಗ ಬಲುಸೋಜಿಗವಾಯಿತು.

"ಓಹೋ! ಕೃಷ್ಣ ಭಟ್ಟರು ನಮಸ್ಕಾರ" ಅಂದರು ಸುಬ್ಬಣ್ಣ ಶೆಟ್ಟರು.

"ಯಾರು? ಸುಬ್ಬಣ್ಣ ಶೆಟ್ಟರೇ? ಪ್ರತಿ ನಮಸ್ಕಾರ. ಯಾವಾಗ ಬಂದಿರಿ. ಏನೆಲ್ಲಾ ವಿಶೇಷ?" ಎಂದು ಕೃಷ್ಣ ಭಟ್ಟರು ಪ್ರಶ್ನಿಸಿದರು.

"ವಿಶೇಷವೇನೂ ಇಲ್ಲ. ಕೆಲವು ಜನರನ್ನು ಇಲ್ಲಿಗೆ ಕರೆದುಕೊಂಡು ಬಂದೆ. ನಿಮ್ಮ ಧನಿಗಳಿಗೆ ಹಲವಾರು ವರ್ಷಗಳಿಂದ ಜನರನ್ನು ಸಂಗ್ರ ಹಿಸಿ ಕೊಡುವ ಕೆಲಸವನ್ನು ಮಾಡುತ್ತಾ ಬಂದಿದ್ದೇನೆ. ನೀವೆಲ್ಲೋ ಅಕಸ್ಮಾತ್ ಮಾಯವಾಗಿರುವಿರಿ. ಸುದ್ದಿಯೇ ಇಲ್ಲ. ಜೀವದಲ್ಲಿರು ವಿರೋ ಇಲ್ಲವೋ? ಎಂದು ಊರಲ್ಲೆಲ್ಲಾ ಸುದ್ದಿ ಹರಡಿತ್ತು. ಈಗ ಇಲ್ಲಿರುವಿರಾ! ಸಂತೋಷ." ಅಂದರು ಸುಬ್ಬಣ್ಣ ಸೆಟ್ಟರು.

"ಇದ್ದುದೆಲ್ಲಾ ಮುಗಿದು ಕೈಯಲ್ಲಿ ಕಾಸಿಲ್ಲದಾಗ ಮಾಯ ವಾಗದೆ ಮತ್ತೇನು ಮಾಡಲಿ? ಹೇಗಾದರೂ ಬದುಕ ಬೇಕಲ್ಲ. ಇಲ್ಲಿ ಇವರಾಶ್ರಯದಲ್ಲಿ ಕಾರಕೂನನಾಗಿ ಸೇರಿಕೊಂಡಿರುವೆ." ಅಂದರು ಕೃಷ್ಣ ಭಟ್ಟರು.

"ಮನುಷ್ಯಾವಸ್ಥೆಯಲ್ಲಿ ಏನೆಲ್ಲ ಆಗುವುದಿಲ್ಲ. ಹಿಂದಿನದೆಲ್ಲಾ ಘಂತೂ ಕಳೆದು ಹೋದುವಲ್ಲ. ಆ ಚಿಂತೆ ಬೇಡ. ಬೇಸರಪಡ ಬೇಡಿ. ನಿಮ್ಮ ಧನಿಗಳು ಬಹಳ ಒಳ್ಳೆಯವರು. ಅವರಂದಂತೆ ನಡ ಕೊಂಡಲ್ಲಿ ನಿಮಗೇನೂ ತೊಂದರೆ ಆಗದು. ಸುಖವಾಗಿ ಇರಬಹುದು" ಅಂದರು ಸುಬ್ಬಣ್ಣ ಶೆಟ್ಟರು. "ಹಾಗೆಯೇ ಆಗಬೇಕು. ಆಗಲಿ. ಎಂದು ನನ್ನ ಹಾರೈಕೆ" ಎಂದು ಹೇಳಿ ಕೃಷ್ಣ ಭಟ್ಟರು ಬೆಳ್ಯಪ್ಪನವರ ಬಳಿ ಸರಿದು ಬಂದ ಕಾರ್ಯ ತಿಳಿಸಿ ತೆರಳಿದರು.

ಇವರಿಬ್ಬರ ಈ ರೀತಿಯ ಸಂಭಾಷಣೆ ಕೇಳಿ ಬೆಳ್ಯಪ್ಪನವರಿಗೂ ಕಾರ್ಯಪ್ಪನವರಿಗೂ ಬಲು ಸೋಜಿಗವಾಯಿತು.

"ಏನು ಈ ಕೃಷ್ಣ ಭಟ್ಟರು ನಿಮಗೆ ಪರಿಚಿತರೇ? ನಿಮ್ಮ ಮಾತಿನ ಸರಣಿ ನೋಡುವಾಗ ಅವರ ಸಂಪೂರ್ಣ ವಿಚಾರ ನಿಮಗರಿದಂತೆ ತೋರುತ್ತಿದೆ. ಮಾತಿನಲ್ಲೇನೊ ಗೂಢವೂ ಹುದುಗಿ ಇದ್ದಂತೆ ಕಾಣು ತ್ತಿದೆ. ಏನದು?" ಎಂದು ಕಾರ್ಯಪ್ಪನವರು ಬೆಳ್ಯಪ್ಪನವರ ಪರವಾಗಿ ಪ್ರಶ್ನಿಸಿದರು.

"ಮತ್ತೇನೂ ಇಲ್ಲ. ಪಾಪ! ಈ ಕೃಷ್ಣ ಭಟ್ಟರ ಅವಸ್ಥೆ ನೋಡುವಾಗ ಮನಸ್ಸಿನಲ್ಲಿ ಏನೋ ಏನೋ ಒಂದು ರೀತಿ ಸಂತಾಪ ವಾಗುತ್ತಿದೆ. ಇವರು ಹೀಗೆ ಜೀವನಕ್ಕಾಗಿ ಕಷ್ಟಪಡಬೇಕಾಗಿರಲಿಲ್ಲ. ಸ್ವತಂತ್ರರಾಗಿ ತಲೆಯೆತ್ತಿ ಬಾಳುವಷ್ಟು ಆಸ್ತಿಪಾಸ್ತಿ ಮೊದಲಾದುವು ಅವರಿಗಿದ್ದುವು. ಅವೆಲ್ಲವನ್ನೂ ದುರ್ಬುದ್ಧಿಯಿಂದ ಹಾಳುಗೆಡವಿ ಈಗ ತಲೆ ಮರಸಿ ಇನ್ನೊಬ್ಬರಡಿಯಾಳಾಗಿ ಜೀವನ ದೂಡಬೇಕಾದ ಪ್ರಸಂಗ ಬಂತಲ್ಲ ಎಂದು ವ್ಯಥೆಯಾಗುತ್ತಿದೆ. ಅಷ್ಟೆ. ಪಾಪ! ಹೇಗಿದ್ದವರು ಹೇಗಾದರು" ಅಂದರು ಸುಬ್ಬಣ್ಣ ಶೆಟ್ಟರು.

ಸುಬ್ಬಣ್ಣ ಶೆಟ್ಟರ ಮುಖದಿಂದ ದುರ್ಬುದ್ಧಿಯಿಂದ ಇದ್ದುದನ್ನೆಲ್ಲಾ ಹಾಳುಗೆಡವಿದರೆಂಬ ವಿಷಯ ಹೊರಬಿದ್ದಾಗ ಕಾರ್ಯಪ್ಪನವರ ಕುತೂ ಹಲ ಕೆದರಿತು. ನನ್ನೊಡನೆ ವಿಶೇಷ ಪ್ರಾಮಾಣಿಕತನ ತೋರಿಸಿದ ಕೃಷ್ಣ ಭಟ್ಟರ ದುರ್ಬುದ್ಧಿ ಏನೆಂದರಿಯಬೇಕೆಂದವರು ಆಗ್ರಹ ಪಟ್ಟರು.

"ಸುಬ್ಬಣ್ಣ ಶೆಟ್ಟರೇ! ಸ್ವತಂತ್ರರಾಗಿ ಬಾಳಿಬದುಕಬಲ್ಲವರಾಗಿದ್ದರೂ ಎಲ್ಲಾ ಹಾಳು ಮಾಡಿಕೊಂಡರೆಂದುಸುರಿದಿರಲ್ಲ. ಅದು ಏನು?" ಎಂದು ಸುಬ್ಬಣ್ಣ ಶೆಟ್ಟರೊಡನೆ ಕುತೂಹಲ ಪೂರ್ವಕ ಕಾರ್ಯಪ್ಪನವರು ಪ್ರಶ್ನಿಸಿದರು.

"ಅದೆಲ್ಲಾ ನಿಮಗೇಕೆ? ಈಗ ಹೇಗೂ ಅವರು ನಿಮ್ಮಾಶ್ರಯ ಪಡೆದಿರುವರಷ್ಟೆ. ಅಂತಹ ಅವರ ವಿಷಯ ನಿಮಗರುಹಿ ಅಲ್ಲನಲ್ಲದ ಹಗರಣ ತಂದೊಡ್ಡಿ ಫಲವೇನು. ಆ ವಿಷಯ ಅಲ್ಲೇ ಬಿಟ್ಟುಬಿಡಿರಿ. ಅದರಲ್ಲೇನೂ ಹುರುಳಿಲ್ಲ" ಅಂದರು ಸುಬ್ಬಣ್ಣ ಶೆಟ್ಟರು.

"ಅವರ ವಿಷಯ ಇದ್ದುದನ್ನು ಇದ್ದಂತೆ ನೀವರುಹಲೇಬೇಕು' ಎಂದು ಬೆಳ್ಯಪ್ಪನವರೂ ಕಾರ್ಯಪ್ಪನವರೂ ಸುಬ್ಬಣ್ಣ ಶೆಟ್ಟರನ್ನೊತ್ತಾಯ ಪಡಿಸಿದರು. ಸುಬ್ಬಣ್ಣ ಶೆಟ್ಟರಿಗೆ ಪೇಚಾಟಕ್ಕಿಟ್ಟುಕೊಂಡಿತು. ಹೇಗೂ ಹೇಳದೆ ನಿರ್ವಾಹವಿಲ್ಲ. ಕೃಷ್ಣ ಭಟ್ಟರ ಜೀವನ ಚರಿತ್ರೆಯನ್ನು ಸೂಕ್ಷ್ಮವಾಗಿ ಸಂಪೂರ್ಣ ಕಾರ್ಯಪ್ಪನವರಿಗೂ ಬೆಳ್ಯಪ್ಪನವರಿಗೂ ತಿಳಿಸಿದರು.

"ಹೀಗೋ?" ಅಂದರು ಬೆಳ್ಯಪ್ಪನವರು.

"ಹೂಂ" ಅಂದರು ಸುಬ್ಬಣ್ಣ ಶೆಟ್ಟರು. ಮಾತುಕತೆ ಮುಕ್ತಾಯ ಹೊಂದಿ ದಲಾಲಿಹಣ ಹಿಡಕೊಂಡು ಸುಬ್ಬಣ್ಣ ಶೆಟ್ಟರು ತಮ್ಮೂರಿಗೆ ತೆರಳಿದರು.

ಕಾರ್ಯಪ್ಪನವರ ಕಾರ್ಯ ಅನಿರೀಕ್ಷಿತವಾಗಿ ಫಲಿಸುವ ಕಾಲ ಬಂದೊದಗಿತು. ಕೃಷ್ಣ ಭಟ್ಟರ ದುರಾಚಾರ ತಿಳಿದು ಅಸಹ್ಯಪಟ್ಟ ಬೆಳ್ಯಪ್ಪನವರನ್ನು ಕಾರ್ಯಪ್ಪನವರು ಮತ್ತಷ್ಟು ರೇಗಿಸಿದರು. "ಈ ಕೃಷ್ಣ ಭಟ್ಟರು ತಮ್ಮದನ್ನೆಲ್ಲಾ ಲಗಾಡಿ ಹಿಡಿದು ಇಲ್ಲಿಗೆ ಬಂದವರು ನಮ್ಮನ್ನೂ ಲಗಾಡಿ ಹಿಡಿಯದಿರಲಾರರು. ಲೆಕ್ಕಪತ್ರಗಳೂ ಅಷ್ಟೊಂದು ಸರಿಯಾಗಿದ್ದಂತೆ ಕಂಡುಬರುವುದಿಲ್ಲ. ಸರಿಯಾದ ಹಿಡಿ ಸಿಕ್ಕದೆ ಮಾತನಾಡುವುದಿಲ್ಲವೆಂದು ನಮ್ಮಗಿದ್ದೆ. ನಮ್ಮಲ್ಲಿ ದುಡಿಯುತ್ತಿರುವ ಕೂಲಿಯಾಳುಗಳಾದ ಹೆಂಗಸರ ಮೇಲೂ ಇವರ ದುಷ್ಟ ದೃಷ್ಟಿ

ಬಿದ್ದಿದೆಯೆಂದು ನನಗೆ ದೂರದೂರದಿಂದ ಸುದ್ದಿ ಸಿಕ್ಕಿದೆ. ಏನೆಲ್ಲಾ ಅನರ್ಥ ಪರಂಪರೆ ತಂದೊಡ್ಡಲಿರುವರೋ?" ಎಂದು ಕಾರ್ಯಪ್ಪ ನವರಂದಾಗ ಬೆಳ್ಯಪ್ಪನವರು ರೇಗಿಬಿದ್ದರು. ಕೃಷ್ಣ ಭಟ್ಟರನ್ನು ಪುಡಿ ಪುಡಿ ಮಾಡಿ ಬಿಡುವೆನೆಂದು ಗರ್ಜಿಸಿದರು.

"ಹೊಸತಾಗಿ ಕೆಲಸಕ್ಕೆ ಸೇರಿದ ಅವರ ಕೈಕಾಲು ಮುರಿದಿಕ್ಕು ವುದು ನಮಗಿಂದ ಕೆಲಸವಲ್ಲ. ನಮಗವರು ಬೇಡವೆಂದಾದರೆ ಹೊರ ದೂಡಿಬಿಡುವ. ನಮ್ಮನ್ನವರು ಸೋಲಿಸಿದುದಕ್ಕೆ ಸಂಬಳ ಕೊಡದೆ ಎರಡೇಟು ಬಿಗಿದು ಅವಮಾನಪಡಿಸಿದರೆ ಧಾರಾಳ ಸಾಕು" ಎಂದು ಕಾರ್ಯಪ್ಪನವರು ಬೆಳ್ಯಪ್ಪನವರಿಗೆ ಸಲಹೆಯಿತ್ತರು. ಏಟೂ ಬಿತ್ತು.

ಏಟು ತಿಂದು ಅವಮಾನಹೊಂದಿ ಕಾಸೊಂದೂ ಸಿಗದೆ ಹೊರ ಬಿದ್ದ ಕೃಷ್ಣ ಭಟ್ಟರು ಮರದಿಂದ ಬಿದ್ದ ಮಂಗನಂತಾದರು. ಒಂದೆಡೆ ಬಿದ್ದ ಏಟುಗಳಿಂದ ಅವರ ಬೆನ್ನು ನೋಯುತ್ತಿತ್ತು. ಇನ್ನೊಂದೆಡೆ ಧನಿಗಳಂದ ಮಾತುಗಳು ಅವರ ಹೃದಯವನ್ನು ಇರಿಯುತ್ತಿದ್ದುವು. ತನ್ನ ಜೀವನದಲ್ಲಿ ನಡೆದ ಘಟನೆಗಳನ್ನೆಲ್ಲಾ ಹೇಳಿ ಧನಿಗಳವಮಾನ ಪಡಿಸಿದುದರಿಂದ ಇನ್ನು ಬದುಕಿ ಫಲವಿಲ್ಲವೆಂದೇ ಅವರ ಮನವನ್ನು ತಿತ್ತು. ತಾನೆಸಗಿದ ಅಕೃತ್ಯಗಳು ಒಂದೊಂದಾಗಿ ನೀನೆಸಗಿದುದು ಸರಿಯೆ? ಎಂದವರನ್ನು ಪ್ರಶ್ನಿಸುತ್ತಿದ್ದುವು. "ಸರಿಸರಿ, ನನ್ನಂತಹ ಪಾಪಿಗೆ ಇಂತಹ ಶಿಕ್ಷೆ ಸಿಗಲೇ ಬೇಕು. ನನ್ನ ಜಮೀನಿನಲ್ಲಿ ವಿಶ್ವಸ್ತರಾಗಿ ದುಡಿದು ಬೆವರಿಳಿಸಿದ ಅಂತೋಣಿ, ಕರಿಯ ಮೊದಲಾ ದವರನ್ನು ಬೈದು ಭಂಗಿಸಿ ಕೂಲಿ ಕೊಡದವ ನಾನು. ದುಡಿದು ಮನೆಯೆಡೆಗೆ ಬರಿಗೈಯಿಂದ ತೆರಳಿದ ಅವರು ಎಷ್ಟೊಂದು ದುಃಖ ಪಟ್ಟಿರಲಾರರು? ಅವರ ಬಡ ಕುಟುಂಬ ನಾನು ಕೂಲಿ ಕೊಡದುದ ರಿಂದ ಎಷ್ಟೊಂದು ಹಸಿದು ಕಂಗಾಲಾಗಿರಬಹುದು! ಆ ಕುಟುಂಬ ದಲ್ಲಿ ಎಳೆಯ ಮಕ್ಕಳೂ ಇದ್ದಿರಬಹುದು. ನಿಷ್ಕಾರಣವಾಗಿ ಅವರನ್ನು ಉಪವಾಸವಿರುವಂತೆ ಮಾಡಿ ಗೋಳಾಡಿಸಿದ ನನಗೂ ಅದೇ ಅವಸ್ಥೆ ಬಂದೊದಗಿತು. ಸನ್ಮಾರ್ಗದಲ್ಲೇ ನಡೆದರೂ ನಿಷ್ಕಾರಣವಾಗಿ ಬೈಗಳು

ಕೇಳಿ ಸಂಬಳ ಸಿಗದೆ ಭಡಿ ತಿಂದು ಹೊರಬೀಳಬೇಕಾದ ಪ್ರಸಂಗ ಬಂದೊದಗಿತು. ನನಗೊದವಿದ ದುರವಸ್ಥೆ ನಾನು ಮಾಡಿದ ಕರ್ಮದ ಫಲ. ನಾನು ಮಾಡಿದ ಅಕೃತ್ಯಗಳು ಒಂದೇ ಎರಡೇ ಹಲವಾರು. ಅವು ಎಲ್ಲವುಗಳ ಫಲವನ್ನೂ ಜೀವಂತನಾಗಿದ್ದರೆ ಇನ್ನೂ ನಾನನು ಭವಿಸಲೇ ಬೇಕು. ಅನುಭವಿಸಲು ತೊಡಗಿರುವೆನು. ಆದರೆ ಅನು ಭವಿಸಿಕೊಳ್ಳುವ ತಾಳ್ಮೆ ನನಗೆಂತು" ಎಂದು ಕೃಷ್ಣ ಭಟ್ಟರು ಬಹು ಚಿಂತೆಗೊಂಡರು. ಬುದ್ಧಿ ಚಂಚಲವಾಯಿತು. ಇನ್ನು ಮೇಲೆ ಎಲ್ಲಿ ಯಾದರೂ ಸಾಗಿ ದುಡಿದುಂಡು ಬದುಕಬೇಕೆನ್ನುವ ಆಸೆ ಅವರಿಗಿಲ್ಲ ದಾಯಿತು. ಈ ಪಾಪಿ ಜೀವ ತನಗಿನ್ನು ಬೇಡ. ಹಲವಾರು ಜನ ರನ್ನು ತಲ್ಲಣಗೊಳಿಸಿ ತಲ್ಲಣಪಡುತ್ತಿರುವ ಈ ಜೀವ ಇನ್ನು ಭೂಮಿ ಯಲ್ಲಿರಬಾರದು. ಈ ಹಾಳು ಜೀವನವನ್ನು ಯಾವುದಾದರೊಂದು ವಿಧದಲ್ಲಿ ಮುಗಿಸಿಬಿಡಬೇಕು ಎಂದು ಉದ್ವೇಗಭರದಲ್ಲಿ ಮಂಕು ಹಿಡಿದ ಅವರ ತಲೆ ಅನ್ನುತಿತ್ತು.

ಹೀಗೆ ಯೋಚಿಸುತ್ತಾ ಪ್ರಾಣವನ್ನೆಂತು ನೀಗುವುದೆಂದು ಕೃಷ್ಣ ಭಟ್ಟರು ಮಡಿಕೇರಿಯ ರಸ್ತೆಯಲ್ಲಿ ಗೊತ್ತುಗುರಿಯಿಲ್ಲದೆ ಸಾಗು ತ್ತಿದ್ದರು. ಅಷ್ಟರಲ್ಲಿ ಹಿಂದಿನಿಂದ ವೇಗವಾಗಿ ಬರುತ್ತಿರುವ ಬಸ್ಸಿನ ಹಾರ್ನ್ ಕೃಷ್ಣ ಭಟ್ಟರಿಗೆ ಕೇಳಿಸಿತು. ಕೃಷ್ಣ ಭಟ್ಟರು ಹಿಂತಿರುಗಿ ನೋಡಿದರು. ಬಸ್ಸು ಭರದಿಂದ ಬರುತಿತ್ತು. ಸನಿಯಕ್ಕೆ ತಲಪಿತು. ಉದ್ವೇಗಭರದಿಂದ ಜೀವನದಲ್ಲಿ ನಿರಾಸೆಗೊಂಡ ಕೃಷ್ಣ ಭಟ್ಟರು ಇದುವೇ ತಕ್ಕ ಮಾರ್ಗ ಸುಲಭೋಪಾಯವೆಂದುಕೊಂಡು ಹಿಂದು ಮುಂದು ನೋಡದೆ ಬಸ್ಸಿನೆದುರು ನೆಗೆದುಬಿಟ್ಟರು.

ಬಸ್ಸಿನಡಿಯಲ್ಲಿ ಬಿದ್ದು ಪ್ರಾಣ ನೀಗುವೆನೆಂದು ನೆಗೆದ ಕೃಷ್ಣ ಭಟ್ಟರು ಬಸ್ಸಿನಡಿಗೆ ಬೀಳಲಿಲ್ಲ. ವೇಗವಾಗಿ ಬರುತ್ತಿರುವ ಬಸ್ಸಿನ ಪಕ್ಕಕ್ಕೆ ಢಿಕ್ಕಿಹೊಡೆದು, ಹೊಡೆದೆಸೆದಂತಾಗಿ ಧೊಪ್ಪನೆ ಪಕ್ಕದ ಚರಂಡಿಗೆ ಬಿದ್ದುಬಿಟ್ಟರು. ಅನಿರೀಕ್ಷಿತ ಅಪಘಾತ ಬಂತೆಂದು ಬಸ್ಸು ಕೂಡಲೆ ನಿಂತುಬಿಟ್ಟಿತು. ಬಸ್ಸಿನ ಸಂಚಾಲಕರೂ ಪ್ರಯಾಣಿಕರೂ

ಕೃಷ್ಣ ಭಟ್ಟರು ಬಿದ್ದಲ್ಲಿಗೆ ಬಂದರು. ಕೃಷ್ಣ ಭಟ್ಟರಿಗೆ ಚೆನ್ನಾಗಿ ಪೆಟ್ಟಾಗಿತ್ತು. ಪ್ರಜ್ಞೆ ಇಲ್ಲದಾಗಿತ್ತು. ಎಲ್ಲರೂ ಅಯ್ಯೋ ಪಾಪ! ಎಂದು ಮರುಗಿದರು.

ಕೂಡಲೆ ಬಸ್ಸಿನವರು ಪೋಲೀಸರಿಗೆ ವರದಿಯೊಪ್ಪಿಸಿದರು. ತತ್‌ಕ್ಷಣ ಪೋಲೀಸ್ ವೇನು ಬಂತು. ಪೋಲೀಸರು ಅವಘಡವೆಂತು ಸಂಭವಿಸಿತೆಂದು ಪರೀಕ್ಷಿಸಿದರು. ಕೃಷ್ಣ ಭಟ್ಟರು ಪ್ರಾಣ ಕಳಕೊಳ್ಳಲು ತನಗೆ ತಾನೇ ಅಪಾಯ ತಂದುಕೊಂಡುದೆಂಬುದು ಪ್ರತ್ಯಕ್ಷದಿಂದಲೂ ಬಸ್ಸಿನ ಪ್ರಯಾಣಿಕರಿಂದಲೂ ಪೋಲೀಸರಿಗರಿಯಿತು ವಾಹನ ನಡೆಸುವವರ ಅಜಾಗ್ರತೆಯಿಂದ ಸಂಭವಿಸಿದ ತಪ್ಪಲ್ಲವೆಂದು ಪೋಲೀಸರು ನಿರ್ಣೈಸಿ ಬಸ್ಸು ಹೊರಡಲನುಮತಿಕೊಟ್ಟರು. ಬಸ್ಸು ಹೊರಟಿತು. ಪೋಲೀಸು ವೇನ್ ಕೃಷ್ಣ ಭಟ್ಟರನ್ನಾಸ್ಪತ್ರೆಗೆ ಸಾಗಿಸಿತು. ಸರಕಾರಿ ಆಸ್ಪತ್ರೆಯಲ್ಲಿ ಕೃಷ್ಣ ಭಟ್ಟರು ಸೇರಿಸಲ್ಪಟ್ಟರು. ಆಸ್ಪತ್ರೆಯಲ್ಲಿ ಉಪಚಾರ ಸಾಗತೊಡಗಿತು. ಡಾಕ್ಟರರು ಪರೀಕ್ಷಿಸಿದರು. "ವಿಶೇಷ ಪ್ರಾಣಾಪಾಯದ ಮಟ್ಟಿಗೇನೂ ಆಗಿಲ್ಲ. ಪೆಟ್ಟು ಚೆನ್ನಾಗಿದೆ. ಪ್ರಜ್ಞೆ ತಪ್ಪಿದೆ." ಎಂದು ಡಾಕ್ಟರರು ಅಭಿಪ್ರಾಯಪಟ್ಟರು. ನರ್ಸುಗಳೂ ಡಾಕ್ಟರರೂ ಉಪಚಾರವೆಸಗಿದಾಗ ಕೃಷ್ಣ ಭಟ್ಟರಿಗೆ ಪ್ರಜ್ಞೆ ಬಂತು.

ಮೂರ್ಛೆ ತಿಳಿದ ಕೃಷ್ಣ ಭಟ್ಟರು ಕಣ್ತೆರೆದು ನೋಡುವಾಗ ಡಾಕ್ಟರರು ಗಾಯಗಳಿಗೆ ಬೇಂಡೇಜು ಕಟ್ಟುತ್ತಿದ್ದರು. ಯೋಗ್ಯ ಚಿಕಿತ್ಸೆ ನಡೆಸುತ್ತಿದ್ದರು. ಕೃಷ್ಣ ಭಟ್ಟರಿಗೆ ನೋವು ಸಹಿಸಲಸದಳವಾಗಿತ್ತು. ಅಯ್ಯೋ ಎಂದು ಕಿರುಚಿದರು. ಗತ ಕಾಲದಲ್ಲಿ ತಾನೆಸಗಿದ ಕೃತ್ಯಗಳು ಒಂದೊಂದಾಗಿ ಮನಃ ಪಟಲದಲ್ಲೆದ್ದು ಮೂಡಿ ಘಾಸಿಮಾಡ ತೊಡಗಿದುವು. ಪ್ರಾಣ ಈಗ ಬಯಸಿದರೂ ಅದು ಹೋಗದೆ ಉಳಿದು ಉಪಚಾರವಾಗುತ್ತಿದೆ ಎಂಬುದು ತಾಳ್ಮೆಯನ್ನು ಮತ್ತಷ್ಟೂ ಕೆಡಿಸಿತು. "ನನಗೆ ನಾನೇ ಬೇಡವೆಂದಾಗಿರುವಾಗ ನೀವೇಕೆ ಉಪಚರಿಸಿ ಕಷ್ಟಪಡುತ್ತೀರಿ. ನನ್ನನ್ನು ಬದುಕಿಸಲು ಯತ್ನಿಸಬೇಡಿ. ಪ್ರಾಣ ದೇಹದಿಂದ ಬೇರ್ಪಟ್ಟಿತಾದರೆ ಅದು ನನಗೆ ಪರಮ ಸುಖ. ಉಪಚರಿಸಿ ಬದುಕಿಸಿ ಇನ್ನೂ ಈ

ನರಕ ಯಾತನೆಯಲ್ಲಿ ನನ್ನನ್ನು ಕೊಳೆಯುವಂತೆ ಮಾಡದಿರಿ." ಎಂದು ಕೃಷ್ಣ ಭಟ್ಟರನ್ನತೊಡಗಿದರು. ಚಿಕಿತ್ಸೆ ಮಾಡಲಸಾಧ್ಯವಾಗುವಂತೆ ಕಿರುಕುಳ ತಂದೊಡ್ಡಲು ಪ್ರಾರಂಭಿಸಿದರು.

ಸಂಕಷ್ಟ ಪೀಡಿತರಿಗೆ ಇಹ ಲೋಕದಲ್ಲಾನೆ ಇಲ್ಲದಾಗುವುದು ಸಹಜ. ದುಃಖ ಪೀಡಿತರನ್ನು ಉಪಚರಿಸಿ ಸಾಂತ್ವನಗೊಳಿಸಿ ಸುಖಿಗಳಾಗುವಂತೆ ಕೈಲಾದಷ್ಟು ಶಕ್ತಿಮೀರಿ ಪ್ರಯತ್ನಿಸಬೇಕಾದುದು ಮನುಷ್ಯ ಧರ್ಮ. ಡಾಕ್ಟರರೂ ನರ್ಸುಗಳೂ ಇಂತಹ ವೃತ್ತಿಯಲ್ಲಿ ವಹಿಸತಕ್ಕ ಹೊಣೆ ಅತ್ಯಧಿಕ. ನಾವು ನಮ್ಮ ಕರ್ತವ್ಯ ಪೂರೈಸಬೇಕು. ನೀವೇನೆಂದರೂ ನಿಮ್ಮನ್ನುಪಚರಿಸದೆ ಬಿಡುವವರು ನಾವಲ್ಲ. ಗಲಾಟೆ ಮಾಡಬೇಡಿ. ಸ್ವಲ್ಪ ಸಮಾಧಾನ ತಕ್ಕೊಳ್ಳಿರಿ. ಉದ್ವೇಗ ಭರದಿಂದ ಅಶಾಂತವಾದ ಹೃದಯದಲ್ಲಿ ಸ್ವಲ್ಪ ಶಾಂತಿ ತಕ್ಕೊಳ್ಳಿರಿ. ನಾವು ನಿಮಗೆ ಅನ್ಯರಲ್ಲ, ಬಂಧುಗಳು. ನಿಮ್ಮ ಸೇವೆಯೇ ನಮ್ಮಗುರಿ. ನಿಮ್ಮ ಸಂಕಟಗಳೇನಿದ್ದರೂ ಅವನ್ನು ಪರಿಹರಿಸಿ ಕೊಡುವವರು ನಾವು. ಧೈರ್ಯದಿಂದ ನಿಮ್ಮ ಕಳವಳನ್ನು ನಮ್ಮಲ್ಲುಸುರಿದರೆ ಅದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡಲು ನಾವು ಸರ್ವದಾಸಿದ್ಧರು. ಭಯಗೊಳ್ಳದಿರಿ, ತೊಂದರೆ ಈಯದಿರಿ, ನಿಮಗೆ ನಮಸ್ಕಾರಗಳು ಎಂದು ಡಾಕ್ಟರರು ವಾತ್ಸಲ್ಯ ಪೂರ್ವಕ ನುಡಿಯುತ್ತಿರುವಾಗ ಕೃಷ್ಣ ಭಟ್ಟರು ತುಸು ತಣ್ಣಗಾಗಿ ನೆಟ್ಟ ದೃಷ್ಟಿಯಿಂದವರ ಮೊಗ ನೋಡಿದರು. ಡಾಕ್ಟರರೂ ಕೃಷ್ಣ ಭಟ್ಟರರನ್ನು ಚೆನ್ನಾಗಿ ನೋಡಿದರು. ವಂಚಿತರಂತೆ ಇಬ್ಬರಿಗೂ ಭಾಸವಾಯಿತು. ಥಟ್ಟನೆ ಗುರತೂ ಹತ್ತಿತು.

"ನಸುನಕ್ಕು ಕೃಷ್ಣ ಭಟ್ಟರೇ ಏನು ಇದೆಲ್ಲಾ ಹೇಗೆ? ನಾವು ಅನ್ಯರಲ್ಲ. ನಿಮ್ಮ ಪರಮ ಮಿತ್ರರು ಹೆದರದಿರಿ" ಅಂದರು ಡಾಕ್ಟರರು.

"ಓಹೋ ನೀವು! ಕೇಶವ ಭಟ್ಟರು ಸ್ವರ್ಗದಿಂದಿಳಿದು ಬಂದ ದೇವತೆಯಂತೆ ದೇಹತ್ಯಾಗ ಮಾಡಲೆಳಸಿದ ನನ್ನನ್ನು ಬದುಕಿಸಲು ನಿರ್ಮಲ ಹೃದಯರಾಗಿ ಪ್ರಯ್ನಸುತ್ತಿರುವಿರಿ. ಗೆಳೆಯರೇ ನೀವೇ ಧನ್ಯರು. ಈ ಪಾಪಿ ಕೃಷ್ಣ ಭಟ್ಟರಲ್ಲೂ ನಿಮಗೆಷ್ಟರ ಮಟ್ಟಿನ ಅನು

ರಾಗ. ಅಂದು ಶಾಲೆಯಲ್ಲಿ ವಿದ್ಯಾಭ್ಯಾಸ ಪೆನಗುತ್ತಿದ್ದಾಗ ಸನ್ಮಾರ್ಗ ದಲ್ಲಿ ಮುನ್ನಡೆಯುತ್ತಿರುವ ನಿಮ್ಮನ್ನು ಬಹುವಿಧದಿಂದ ಪರಿಹಾಸ್ಯ ಮಾಡಿ ಅಲ್ಲಸಲ್ಲದ ಕಿರುಕುಳ ತಂದೊಡ್ಡುತ್ತಿದ್ದವ ನಾನು. ಅದೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ರಾಗದ್ವೇಷಗಳನ್ನು ನನ್ನಲ್ಲಿ ತೋರಿಸದೆ ಕರ್ತವ್ಯ ಪಥದಲ್ಲಿ ಮುಂದುವರಿಯುತ್ತಿದ್ದವರು ನೀವು. ನಿಮ್ಮಂತಹ ಸನ್ಮಾರ್ಗಿಗಳು ಬಯಸಿದ ಗುರಿಯನ್ನು ಎಂತೆಂತಹ ತೊಡರುಗಳಿದ್ದರೂ ತಲಪದಿರುವರೇ? ಎಂ. ಬಿ. ಬಿ. ಎಸ್. ಆಗಬೇಕೆಂದಿದ್ದ ನಿಮ್ಮಾಸೆ ಫಲಿಸಿ ಎಷ್ಟೊಂದು ದುಃಖಪೀಡಿತರ ದುಃಖೋಪಶಮನವನ್ನು ನೀವೆಸ ಗಿದಿರೆಂದು ದೇವರೇ ಬಲ್ಲ. ಆದರೆ ಚಿಕ್ಕಂದಿನಿಂದಲೇ ಕಾಲುಜಾರಿ ಭ್ರಾಂತಿಯ ಸುಳಿಯಲ್ಲಿ ಮುಳುಗಿದ ನನ್ನಿಂದ ಎಷ್ಟೊಂದು ಜನರು ಕಷ್ಟಪಡುವಂತಾಯಿತು. ಗೆಳೆಯರು, ಅಪ್ಪರು, ಇನ್ನಿತರ ಊರ ಮಹ ನೀಯರು ಮೊದಲಾದವರೆಲ್ಲಾ ನನ್ನಿಂದಲಾಗಿ ವೃಥಾ ತೊಂದರೆಗೊಳ ಗಾದರು. ಅಯ್ಯೋ ಅದನ್ನು ನೆನಸಿದರೆ ಈಗ ನನಗೆ ಈ ನೋವಿ ಗಿಂತಲೂ ಅತ್ಯಧಿಕವಾದ ವೇದನೆ ಅದರಿಂದ ಆಗುತ್ತಿದೆ. ಗೆಳೆಯರೇ ನಾನು ನನ್ನ ಕೃತ ಕರ್ಮಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವೆ. ಈಗ ನನಗೆ ಪಶ್ಚಾತ್ತಾಪ ಬಂದಿದೆ. ಆದರೆ ಕೈಮೀರಿದಾಗ ಏನೆನಗಲಿ. ಈ ದುಷ್ಟನಾದ ದೇಹ ಭೂಮಿಯಲ್ಲಿರಬಾರದೆಂದೇ ನನ್ನ ಎಣಿಕೆ ಎಂದೆನ್ನುತ್ತಾ ಕೃಷ್ಣ ಭಟ್ಟರು ಕಣ್ಣೀರಿನ ಹೊಳೆ ಹರಿಸಿದರು.

"ಪ್ರಿಯ ಗೆಳೆಯರೇ! ದುಃಖಪಡಬೇಡಿ. ನೀವು ಪುಟಕ್ಕಿಟ್ಟ ಚಿನ್ನದಂತೆ ಈಗ ಪರಿಶುದ್ಧರಾಗಿರುವಿರಿ. ಪ್ರಾಣ ಕಳಕೊಳ್ಳುವ ಹವ್ಯಾಸಕ್ಕೆ ಕೈಯಿಕ್ಕದಿರಿ. ಮನವಿದ್ದಲ್ಲಿ ಸರ್ವವೂ ಇದೆಯೆಂದಿರು ವಾಗ ಇನ್ನಾದರೂ ಒಳ್ಳೆಯ ಲೋಕೋಪಕಾರಿ ಕೆಲಸಗಳಲ್ಲಿ ಭಾಗವಹಿಸಿ ಹಿಂದಿನ ನಿಮ್ಮ ಮಾಲಿನ್ಯವನ್ನು ತೊಡೆದುಕೊಳ್ಳಿರಿ. ಪ್ರಾಣ ನೀಗಿದರೆ ಫಲವೇನೂ ಇಲ್ಲ" ಎಂದು ಡಾಕ್ಟರರು ಕೃಷ್ಣ ಭಟ್ಟ ರನ್ನು ಸಂತೈಸಿದರು.

"ಗೆಳೆಯರೇ ನಾನೀಗ ದಾರಿಗಾಣದ ಕುರುಡನಾಗಿರುವೆನು. ಕೈ ಕೊಟ್ಟು ಮುನ್ನಡೆಸುವ ಭಾರ ನಿಮ್ಮಂತಹ ನಿರ್ಮಲ ಹೃದಯರಾದ

ಮಿತ್ರರಿಂದಲೇ ಆಗಬೇಕು. ಕ್ಷಮಿಸಿರಿ. ನನಗೆ ನೀವೇ ಗತಿ" ಎಂದು ಕೃಷ್ಣ ಭಟ್ಟರು ಕೈಜೋಡಿಸಿದರು.

"ಈಗ ತುಸು ಶಾಂತಚಿತ್ತರಾಗಿರಿ. ಎಲ್ಲವನ್ನೂ ಸಾವಧಾನ ವಾಗಿ ಯೋಚಿಸಿ ಮಾತನಾಡಿ ಬಗೆಹರಿಸುವ, ದಾರಿ ಹುಡುಕುವ. ಈಗ ನನಗೆ ಬೇರೆಕಡೆ ದುಃಖಿತರನ್ನೂ ರೋಗಪೀಡಿತರನ್ನೂ ಉಪಚರಿ ಸಲು ತೆರಳಬೇಕಾಗಿದೆ" ಎಂದೆನ್ನುತ್ತಾ ಡಾಕ್ಟರರು ಅವರನ್ನು ಉಪ ಚರಿಸಿದರು. ಕೃಷ್ಣ ಭಟ್ಟರ ಉದ್ವಿಗ್ನ ಹೃದಯ ತುಸುಮಟ್ಟಿಗೆ ಶಾಂತ ವಾಯಿತು.